# ಮುತ್ತಿನ ಚಿಪ್ಪು

(ಕಾದಂಬರಿ)



ಕೆ. ನಾಗೇಶರಾಯ



ಪ್ರಚಲಿತ ಸಾಹಿತ್ಯ
ಬೆಂಗಳೂರು ನಗರ

೧೯೪೭ ರೂ. ೧

# ಮುನ್ನುಡಿ

ಮುತ್ತಿನ ಚಿಪ್ಪಿನ ಕಥಾವಸ್ತು ನನ್ನ ಮನದಲ್ಲಿ ಮೂಡಿ ಬಹಳ ದಿನಗಳಾದುವು. ಅದನ್ನು ಬರೆದೂ ಒಂದು ವರ್ಷವಾಗಿದೆ.

ನಮ್ಮ ಸಮಾಜದಲ್ಲಿ ಪಾರ್ವತಮ್ಮ ಮತ್ತು ರಾಮುವಿನಂಥ ವ್ಯಕ್ತಿಗಳೇನೂ ಬಹಳ ವಿರಳರಲ್ಲ. ಸಾಮಾನ್ಯರಿಗೆ ತಮ್ಮ ಜೀವನದ ನೂರು ಗೊಂದಲಗಳ ನಡುವೆ ಇಂತಹ ವ್ಯಕ್ತಿಗಳ ಜೀವನ ಸಂಗ್ರಾಮದ ಚಿತ್ರ ಕಣ್ಣಿಗೆ ಬೀಳುವುದಿಲ್ಲ. ಇಂತಹ ಒಂದು ವ್ಯಕ್ತಿಯ ಜೀವನದ ಬಗ್ಗೆ ನನ್ನಲ್ಲಾದ ಅನುಕಂಪನಗಳ ಪ್ರತೀಕವೇ ಈ ಕಾದಂಬರಿ.

ಮೊದಲಿನಿಂದಲೂ ನನ್ನ ಬರವಣಿಗೆಗಳನ್ನು ನೋಡಿ ಪ್ರೋತ್ಸಾಹವಿತ್ತು ನನ್ನನ್ನು ಒಂದು ಮಟ್ಟಕ್ಕೆ ತಂದ ನನ್ನ ಅಣ್ಣಂದಿರಾದ ಅ. ನ. ಕೃಷ್ಣರಾಯರು ತೋರಿದ ದಾರಿ ನಾ ಮರೆಯಲಾರೆ.

ನನ್ನ ಅಪಕ್ವಭಾಷೆಯಲ್ಲಿದ್ದ ಇದನ್ನು ಮೊದಲು ಭದ್ರಾವತಿಯ ಕಬ್ಬಿಣದ ಮತ್ತು ಉಕ್ಕಿನ ಕಾರ್ಖಾನೆಯ ಮಾಸ ಪತ್ರಿಕೆಯ ಸಂಪಾದಕರು ಬೆಳಕಿಗೆ ತಂದಿದಾರೆ. ಈಗ, ಇದನ್ನು ತಿದ್ದಿ ತಮ್ಮ ಅಮೂಲ್ಯ ಸಮಯವನ್ನೆಲ್ಲ ವ್ಯಯಿಸಿ, ಹೊಸತೊಂದು ರೂಪಕೊಟ್ಟು ಗೆಳೆಯರಾದ ಕುಮಾರ ವೆಂಕಣ್ಣನವರು ತಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಿದಾರೆ. ಇವರೆಲ್ಲರ ಉಪಕಾರಗಳಿಗೆ ನಾ ಚಿರಋಣಿ.

ಕನ್ನಡನಾಡು ನನ್ನ ಈ ಮೊದಲ ಕಾಣಿಕೆ. ಸ್ವೀಕರಿಸಿ ಪ್ರೋತ್ಸಾಹವೀಯುದಿರದೆಂದು ನಂಬಿದೇನೆ.

೧೫—೫—೪೬

ಭದ್ರಾವತಿ

ಕೆ. ನಾಗೇಶರಾಯ

# ಮುತ್ತಿನ ಚಿಪ್ಪು

## ಒಂದು

ಸಿರಿಯ ಕಳೆಯಿಂದ ತುಂಬಿದ್ದ ರಾಯರ ನಿವಾಸವು, ಇಂದು ರೋದನದ ಬೀಡಾಗಿತ್ತು. ಅದಕ್ಕೆ ಕಾರಣರಾಗಿದ್ದ ರಾಯರ ಆತ್ಮವು ಇಹಲೋಕವನ್ನು ತ್ಯಜಿಸಿ ಮೂರು ದಿನಗಳಾಗಿದ್ದವು. ಅವರ ಕುಟುಂಬ ಪಾರ್ವತಮ್ಮನವರ ಗೋಳು ಅಸಾಧ್ಯವಾಗಿತ್ತು. 'ನನ್ನನ್ನು ಅವರೊಡನೆ ಕಳುಹಿಸಿಬಿಡಿ' ಎಂದು ಎಲ್ಲರ ಕಾಲಿಗೂ ಬಿದ್ದು ಗೋಗರೆಯುತಿದ್ದರು. ಎದುರಿಗಿದ್ದ ಮಕ್ಕಳೂ ಸಂಸಾರದಲ್ಲಿ ಉಂಟಾಗಿದ್ದ ಅನರ್ಥವು ಗೊತ್ತೆಂದು ಸೂಚಿಸುವ ಹಾಗೆ ಅಳುತಿದ್ದವು.

ದಿವಂಗತರಾದ ರಾಯರು ಊರಿನ ಗಣ್ಯ ವ್ಯಕ್ತಿಯಾಗಿದ್ದರು. ಅವರಲ್ಲಿ ಗರ್ವ ಅಹಂಕಾರಗಳೇನೂ ಇರಲಿಲ್ಲ. ಎಲ್ಲವರಿಗೂ ಬೇಕಾದವರಾಗಿದ್ದರು. ತಮ್ಮ ಹೃದಯದಲ್ಲಿ ಎಷ್ಟು ಶುದ್ಧರಾಗಿದ್ದರೋ ಅಂತೆಯೇ ಊರಿನ ಜೀವನ ಜ್ಯೋತಿಯೂ ಆಗಿದ್ದರು. ಮಿಲ್ಲಿನ ತಮ್ಮಯ್ಯನವರೆಂದರೆ ಸೌಜನ್ಯದ ಕುರುಹೆಂದೇ ಅನೇಕರು ಭಾವಿಸಿದ್ದರು. ಬಡತನ ಮತ್ತು ಅದರ ಕಷ್ಟಗಳನ್ನು ಅನುಭವಿಸಿದ್ದು ಅದರ ಕಾಠಿಣ್ಯವು ಗೋಚರವಾಗಿದ್ದರಿಂದ ತಮ್ಮ ಮನೆಯನ್ನು ಬಡವರ ಆಶ್ರಮವನ್ನಾಗಿ ಮಾಡಿದ್ದರು. ಅವರು ಪ್ರವರ್ಧಮಾನಕ್ಕೆ ಬಂದಂತೆ ಅವರ ದೂರದ ಬಂಧುಗಳೆಲ್ಲಾ ಅವರ ಮನೆಯಲ್ಲಿ ಬಿಡಾರ ಹೂಡಲು ಯತ್ನಿಸುತಿದ್ದರು. ಆದರೂ ಯಾರನ್ನೂ ಯಾಕೆ ಬಂದೆ, ಯಾವಾಗ ಬಂದೆ, ಯಾವಾಗ ಹೊರಡುತ್ತೀ ಎಂತ ಕೇಳುತ್ತಲೇ ಇರಲಿಲ್ಲ. ತಮ್ಮ ಮನೆಯವರ ವಿಷಯವೊಂದರಲ್ಲಿ ಮಾತ್ರವೇ ಅಲ್ಲ; ಇವರ ಉದಾರ ಹಸ್ತವು ಅನೇಕ ಸಾರ್ವಜನಿಕ ಕಾರ್ಯದಲ್ಲಿಯೂ ಕಾಣಬರುತಿತ್ತು. ಅಶಕ್ತ ಪೋಷಕ ಸಭೆಯಿಂದ ಮೊದಲುಗೊಂಡು ಅನೇಕ ಸಾಮಾಜಿಕ ಸಂಸ್ಥೆಗಳ ವರಿವಿಗೂ ಉದಾರ ದಾನವನ್ನು ನೀಡಿದ್ದರು. ಅವರ ಕುಟುಂಬ ಪಾರ್ವತಮ್ಮನವರೂ

ತಮ್ಮ ಪತಿಯ ಧರ್ಮಕಾರ್ಯದಲ್ಲಿ ಉತ್ಸಾಹ ತೋರಿಸುತ್ತಿದ್ದರು. ಎಷ್ಟೋ ಬಡ ವಿದ್ಯಾರ್ಥಿಗಳು ಪಾರ್ವತಮ್ಮನವರಿಗೆ ತಮ್ಮ ಕಷ್ಟಗಳನ್ನು ಹೇಳಿಕೊಂಡು ಸಹಾಯ ಪಡೆಯುತ್ತಿದ್ದರು.

ರಾಯರು ಹುಟ್ಟುವಾಗಲೇ ಸಿರಿತನದ ಭಾಗ್ಯವನ್ನು ಪಡೆದಿರಲಿಲ್ಲ. ಅವರ ತಂದೆ ತಾಯಿಗಳು ಬಹಳ ಬಡವರು. ಮಗನನ್ನು ತಕ್ಕಮಟ್ಟಿಗೆ ಓದಿಸಲೂ ಅವರಿಗೆ ಸಾಧ್ಯವಾಗಲಿಲ್ಲ. ವೃದ್ಧರಾದ ಮಾತಾಪಿತೃಗಳಿಗೆ ತಮ್ಮ ಮಗನೇ ಪೋಷಕನಾಗಬೇಕಾಗಿ ಪರಿಣಮಿಸಿತು. ನೌಕರಿ ಬೇಕೆಂದರೆ ಅದಕ್ಕೆ ಹೆಚ್ಚಿನ ವಿದ್ಯಾಭ್ಯಾಸವಿರಲಿಲ್ಲ. ಯಾವುದಾದರೊಂದು ಉದ್ಯೋಗವನ್ನು ಕೈಕೊಳ್ಳಬೇಕೆಂದರೆ ಅದಕ್ಕೆ ತಕ್ಕ ಬಂಡವಾಳವು ಮೊದಲೇ ಇರಲಿಲ್ಲ.

ಇಂತಹ ತೊಂಚವಂಚದಲ್ಲಿರುವಾಗ ಪಾರ್ವತಮ್ಮನವರ ತಂದೆ ತಮ್ಮ ಮಗಳನ್ನು ತಂದುಕೊಳ್ಳಬೇಕೆಂದು ಪ್ರಾರ್ಥಿಸಿದರು. ರಾಯರ ತಂದೆಯವರಿಗೇನೋ ತಮ್ಮ ಮಗನಿಗೆ ಬೇಗನೆ ವಿವಾಹ ಮಾಡಬೇಕೆಂದು ಆಸೆ. ಆದರೆ ಸೊಸೆ ಮನೆಗೆ ಬಂದ ಮೇಲೆ ತಮ್ಮ ದಾರಿದ್ರ್ಯದಲ್ಲಿ ಅವಳೂ ಒಬ್ಬ ಪಾಲುಗಾರಳಾಗಬೇಕಾಗುವುದಲ್ಲಾ ಎಂಬ ಭಯದಿಂದ ತಮ್ಮ ಆಸೆಯನ್ನು ದೂರ ತಳ್ಳಿದ್ದರು. ಅಂತೆಯೇ ಪಾರ್ವತಮ್ಮನವರ ತಂದೆಯವರು ಬಂದು ಕೇಳಿದಾಗ ನಿಜಸ್ಥಿತಿಯನ್ನು ಇದ್ದಂತೆ ಹೇಳಿದರು. ಆದರೆ ಅವರು ಹತಾಶರಾಗಿ ಹಿಂದಿರುಗಲಿಲ್ಲ. ಅಳಿಯನಿಗೆ ದ್ರವ್ಯಸಹಾಯ ಮಾಡುವುದಾಗಿಯೂ, ಅದರಿಂದ ಯಾವುದಾದರೊಂದು ಚಿಕ್ಕ ಉದ್ಯೋಗವನ್ನು ಕೈಕೊಳ್ಳಬಹುದೆಂದೂ ತಿಳಿಸಿ ಮದುವೆಯ ಮುಹೂರ್ತವನ್ನು ಗೊತ್ತುಮಾಡಿಕೊಂಡು ತಮ್ಮೂರಿಗೆ ತೆರಳಿದರು.

ಪಾರ್ವತಮ್ಮ ತನಗೆ ಅನುರೂಪಿಣಿಯಾದ ಮಡದಿಯಾಗಲಾರಳೆಂದು ವರನು ತಿಳಿದಿದ್ದನು. ಆದರೆ ಮದುವೆಯಾದ ಮೇಲೆ ಆ ಅಭಿಪ್ರಾಯವನ್ನು ಬದಲಿಸಬೇಕಾಯಿತು. ತನಗಿಂತಲೂ ಸಿರಿವಂತರಾಗಿದ್ದವರ ಮಗಳು ತಮ್ಮ ಮನೆಯ ಬಡತನವನ್ನು ನೋಡಿ ಉದಾಸೀನಗೊಳ್ಳಬಹುದೆಂದು ತಿಳಿದಿದ್ದನು. ಬದಲಾಗಿ ಬಡತನವನ್ನು ಲೆಕ್ಕಿಸದೆ ಸುಖ ದುಃಖದಲ್ಲಿ ಸಮಭಾಗಿಯಾಗುತ್ತಿದ್ದುದನ್ನು ನೋಡಿ ಬಹಳ ಸಂತೋಷಗೊಂಡನು. ಪಾರ್ವತಮ್ಮ ಅತ್ತೆ ಮಾವಂದಿರಿಗೆ ಬಹಳ ಅಚ್ಚುಮೆಚ್ಚಿನವಳಾದಳು.

ಮಾವನ ಸಹಾಯದಿಂದ ರಾಯರು ಒಂದು ಚಿಕ್ಕ ಅಂಗಡಿಯನ್ನು ತೆರೆದರು. ದಿನ ಕಳೆದ ಹಾಗೆಲ್ಲಾ ಅಂಗಡಿಯ ವ್ಯಾಪಾರವು ಅಭಿವೃದ್ಧಿಗೊಳ್ಳುತ್ತಲಿದ್ದಿತು.

ಪಾರ್ವತಮ್ಮನವರು ಬಹಳ ಬೇಗನೆ ರಾಯರ ಮನೆಯ ಸಂಸಾರಕ್ಕೆ ಸರಿಹೋದರು. ತಂದೆಯ ಮನೆಯಲ್ಲಿದ್ದಾಗ ಕಷ್ಟದ ಕೆಲಸಗಳೇನೂ ಇರಲಿಲ್ಲ. ಆದರೆ ಪತಿಯ ಮನೆಗೆ ಬಂದ ಮೇಲೆ ಆ ಕೆಲಸಗಳನ್ನೆಲ್ಲಾ ನಗುನಗುತ್ತಾ ಹವಣಿಸತೊಡಗಿದರು. ರಾಯರು ಮನೆಗೆ ಬರುವ ವೇಳೆಗೆ ತಮ್ಮ ಎಲ್ಲಾ ಕಾರ್ಯಗಳನ್ನೂ ಮುಗಿಸಿ ಮಂದಸ್ಮಿತರಾಗಿ ಎದುರುನೋಡುತ್ತಿದ್ದರು. ರಾಯರಿಗಂತೂ ಅಂಗಡಿಯ ಬಾಗಿಲು ಮುಚ್ಚಿದ ನಂತರ ಮನೆ ಸೇರುವ ವರೆಗೂ ಪ್ರಪಂಚವು ಶೂನ್ಯವಾಗಿ ಪರಿಣಮಿಸುತ್ತಿತ್ತು. 'ಪಾರ್ತೀ, ನಮ್ಮ ಬಡತನದ ಮನೆಗೆ ಭಾಗ್ಯಲಕ್ಷ್ಮಿಯಂತೆ ಬಂದೆ ಕಣೇ!' ಎಂದು ಸಾರಿ ಸಾರಿ ಹೇಳುತ್ತಿದ್ದರು. 'ದಯವಿಟ್ಟು ಬಡತನದ ಮನೆ ಎಂದು ಇನ್ನೊಂದು ಸಾರಿ ನುಡಿಯಬೇಡಿ. ನೀವು ನನ್ನ ಸರ್ವಸ್ವ ಇರುವಾಗ ನನಗೆ ಅದೇ ಸ್ವರ್ಗ' ಎನ್ನುತ್ತಿದ್ದರು ಪಾರ್ವತಮ್ಮನವರು.

ರಾಯರ ಹತ್ತಿರ ಒಂದೆರಡು ಕಾಸುಗಳು ನಿಲ್ಲುತ್ತಾ ಬಂದವು. ಈ ಎಲ್ಲಾ ಸಂಭ್ರಮಗಳ ಮಧ್ಯೆ ಪಾರ್ವತಮ್ಮನವರು ಬೇರೆ ಒಂದು ಹೆಣ್ಣು ಮಗುವನ್ನೂ ಹೆತ್ತರು. ಸೀತಾಲಕ್ಷ್ಮಿಯ ಜನನದಿಂದ ಮನೆಯ ಸಡಗರವೂ ಹೆಚ್ಚಾಯಿತು.

ತಮ್ಮ ಕನಸು ನನಸಾಗುತಿದ್ದುದನ್ನು ಕಂಡು ರಾಯರು ಸಂತೋಷಗೊಂಡರು. ಹೆಚ್ಚಾಗಿ ದುಡ್ಡನ್ನು ಗಳಿಸಿ ಧನವಂತರಾಗಬೇಕೆಂಬ ಆಸೆ ಅವರಿಗೆ ಇರಲಿಲ್ಲ. ಆದರೆ ತಮ್ಮ ಜೀವಮಾನದಲ್ಲಿ ಒಂದು ದೊಡ್ಡ ಗಿರಣಿ ಸ್ಥಾಪಿಸಬೇಕೆಂಬ ಇಚ್ಛೆ ಅವರದು. ಸೀತಾಲಕ್ಷ್ಮಿಯ ಜನನದ ನಂತರ ರಾಯರಿಗೆ ಲಕ್ಷ್ಮಿಯೂ ಒಲಿಯುತ್ತಾ ಬಂದಳು.

ಅದೊಂದು ದಿನ ರಾತ್ರಿ ಊಟವಾದ ಕೂಡಲೇ ಪಾರ್ವತಮ್ಮನವರನ್ನು ಕೂಗಿದರು. 'ನಾನೇ ಬರುತ್ತಲಿದ್ದೆ, ನೀವೇ ಕೂಗಿದಿರಿ' ಎಂದರು ಪಾರ್ವತಮ್ಮನವರು.

ನಿತ್ಯವೂ ಪತಿಯೊಡನೆ ಎಷ್ಟು ಹೊತ್ತಿಗೆ ಕೂಡಿಕೊಳ್ಳುವೆನೆಂದು ಆತುರ

ಪಡುತ್ತಿದ್ದ ಪಾರ್ವತಮ್ಮನವರು ಇಂದು ವಿಶೇಷ ಸಂಗತಿಯೊಂದನ್ನು ಪತಿಗೆ ತಿಳಿಸಬೇಕೆಂದು ಬಹಳ ಉತ್ಸಾಹಗೊಂಡು ಬಂದರು. ತಮ್ಮ ಪತ್ನಿಗೆ ಒಂದು ವಿಶೇಷ ಸಂಗತಿಯನ್ನು ತಿಳಿಸಲು ರಾಯರೂ ಅಷ್ಟೇ ಹಾತೊರೆಯುತ್ತಿದ್ದರು. ಗಿರಣಿಯನ್ನು ಸ್ಥಾಪಿಸಬೇಕೆಂಬ ಹಂಬಲ ತಮ್ಮ ಮನದಲ್ಲಿಯೇ ಇತ್ತು. ಇಂದು ಅದನ್ನು ಮಡದಿಗೆ ತಿಳಿಸದೆ ಇರಲು ಅವರ ಮನಸ್ಸು ಇಷ್ಟಪಡಲಿಲ್ಲ. ಪಾರ್ವತಮ್ಮನವರು ತಾವು ಹೇಳುವ ಸಂಗತಿಯನ್ನು ಮರೆತು ಅವರ ತೊಡೆಯ ಮೇಲೆ ತಲೆಯನ್ನಿಟ್ಟು ಅವರು ಹೇಳುವುದನ್ನು ಆಲಿಸ ತೊಡಗಿದರು. ರಾಯರು ತಮ್ಮ ಮನಸ್ಸಿನಲ್ಲಿದ್ದ ಆಸೆ, ಅದು ಸಫಲವಾಗಲು ಮಾಡುತ್ತಿದ್ದ ಪ್ರಯತ್ನಗಳನ್ನೂ ತಮ್ಮ ಮಡದಿಗೆ ಅರುಹಿದರು.

ಹೇಳುವುದನ್ನು ನಿಲ್ಲಿಸಿದ ಕೂಡಲೇ ಪಾರ್ವತಮ್ಮನವರು ತಮ್ಮ ಹೃದಯ ಬಿಚ್ಚಿದರು.

'ನಿಮಗೆ ಗೊತ್ತೇ ಸಮಾಚಾರ?' ಎಂದರು. ರಾಯರು ಅದೇನಿರಬಹುದೆಂದು ಸ್ವಲ್ಪ ಹೊತ್ತು ಯೋಚಿಸಿದರು. ಕೊನೆಗೆ 'ಉಹು' ಎಂದು ಹೇಳಿದಾಗ ಪಾರ್ವತಮ್ಮನವರು 'ನೀವೇ ಊಹಿಸಿ ನೋಡೋಣ' ಎಂದರು.

'ಹೊಸ ಸೀರೆ ತೆಗೆದುಕೊಂಡೆಯಾ?'

'ಅಲ್ಲಾ.'

'ಸೀತೆಗೆ ಆರತಿ ಎತ್ತಬೇಕೆಂದಿದ್ದೀಯಾ.'

'ಉಹೂ.'

'ನಿಮ್ಮೂರಿಂದ ಕಾಗದ ಬಂದಿದೆಯೋನೋ?'

'ಅಲ್ಲಾ, ಹೋಗಲಿ ಆ ವಿಷಯ........ನಿಮ್ಮ ಗಿರಣಿಗೆ ಏನು ಹೆಸರಿಡಬೇಕೆಂದಿದ್ದೀರಾ?'

'ಹೆಸರೇ' ಎಂದು ಸ್ವಲ್ಪ ಯೋಚಿಸಿದಂತೆ ನಟಿಸಿ 'ಭಾಗ್ಯಲಕ್ಷ್ಮೀ ಅಕ್ಕಿ ಗಿರಣಿ' ಎಂದು ಹೆಸರಿಡಬೇಕೆಂದಿದ್ದೇನೆ' ಎಂದರು.

'ಅಯ್ಯೋ ಹೆಂಗಸರ ಹೆಸರೇ! ನಾನು 'ರಾಮನೋ' 'ಕೃಷ್ಣನೋ' ಎಂದು ಯೋಚಿಸುತ್ತಿದ್ದೆ.'

'ಹೆಸರೇನಾದರೂ ಆಗಲಿ, ಅದಕ್ಕೆ ಯೋಚಿಸಬೇಕೇ ಚಿನ್ನಾ' ಎಂದು ತಮ್ಮ ಹೆಂಡತಿಯ ಮುಖವನ್ನು ತಮ್ಮ ಮುಖದಿಂದ ಮುಚ್ಚಿದರು.

'ಅಲ್ಲಾ, ಅದಕ್ಕಲ್ಲಾ........ನಮ್ಮ ಮುಂದಿನ ಮಗುವಿನ ಹೆಸರನ್ನು ಯೋಚಿಸುತ್ತಿದ್ದೆ' ಎಂದು ತುಸು ನಾಚಿಕೆಯಿಂದ ಹೇಳಿದರು. ರಾಯರಿಗೆ ಅದರ ಅರ್ಥವು ಕೂಡಲೇ ಹೊಳೆಯಿತು. ಆಗ 'ಹಾಗಾದರೆ' ಎಂದು ಹುಸಿನಗೆ ನಕ್ಕರು. ಪಾರ್ವತಮ್ಮನವರ ಕೆನ್ನೆಗಳೆರಡೂ ಕೆಂಪೇರಿದವು. 'ಎರಡು ತಿಂಗಳು ನನಗೆ ಈಗ' ಎಂದರು. ಅಲ್ಲಿಂದ ಸ್ವಲ್ಪ ಕಾಲ ಇಬ್ಬರೂ ಎಚ್ಚರದಿಂದಿರುವಂತೆ ಇರಲಿಲ್ಲ.

ಮುಂದೆ ಪುನಃ ಹೆಣ್ಣುಮಗು ಹುಟ್ಟಿತು. ಅದಕ್ಕೆ 'ಭಾಗ್ಯಲಕ್ಷ್ಮಿ' ಎಂದು ನಾಮಕರಣವನ್ನೂ ಮಾಡಿದರು. ಅದಾದ ಕೆಲವು ತಿಂಗಳೊಳಗೆ ರಾಯರು 'ಅಕ್ಕಿ ಗಿರಣಿ'ಯನ್ನು ಸ್ಥಾಪಿಸಿದರೆಂದೂ ಊರಿನವರಿಗೆ ಗೊತ್ತಾಯಿತು.

ತಮಗೆ ಹುಟ್ಟಿದ ಮಗುವು ಗಂಡಾಗಿದ್ದರೆ ಚೆನ್ನಾಗಿರುತ್ತಿತ್ತೆಂದು ಪಾರ್ವತಮ್ಮನವರಿಗೆ ಆಗಾಗ್ಗೆ ಅನಿಸುತ್ತಿತ್ತು. ಈ ವಿಚಾರ ರಾಯರಿಗೆ ಗೊತ್ತಾದಾಗ 'ಪಾತೂ, ನಾನೇನು ಮುದುಕನಾಗಿಬಿಟ್ಟಿದ್ದೇನೇನೇ, ಅಥವಾ ನಿನಗಿನ್ನು ಮಕ್ಕಳೇ ಆಗುವುದಿಲ್ಲವೋ?' ಎಂದು ಹಾಸ್ಯಮಾಡುತ್ತಿದ್ದರು. ಒಂದೊಂದು ಸಾರಿ 'ನಮಗೆ ಗಂಡುಮಗುವು ಇಲ್ಲದಿದ್ದರೂ ಚಿಂತೆಯಿಲ್ಲ, ರಾಮುಪ್ಪ ಇಲ್ಲವೇ ಅವನೇ ನಮ್ಮ ಮಗ' ಎಂದು ನುಡಿಯುತ್ತಿದ್ದರು.

ಮೊದಲೆರಡು ಸಂತಾನವೂ ಹೆಣ್ಣೇ ಆದುದರಿಂದ ತಮ್ಮ ಚಿಕ್ಕಪ್ಪನ ಮಗನಾದ ರಾಮುಪ್ಪನನ್ನು ಹುಟ್ಟಿದ ಮಗನಿಗಿಂತಲೂ ಹೆಚ್ಚಾಗಿ ಕಾಣುತ್ತಿದ್ದರು. 'ನಿಮ್ಮ ತಂದೆ ಯಾರಯ್ಯಾ' ಎಂದು ಯಾರಾದರೂ ರಾಮುಪ್ಪನನ್ನು ಕೇಳಿದರೆ ತಮ್ಮಯ್ಯನವರೆಂದೇ ಹೇಳುತ್ತಿದ್ದನು.

ದಿನ ಕಳೆದಂತೆಲ್ಲಾ ರಾಯರ ವ್ಯಾಪಾರವು ಚೆನ್ನಾಗಿ ನಡೆಯುತ್ತಿತ್ತು. ಹಬ್ಬಗಳನ್ನೇನಾದರೂ ಮನೆಯಲ್ಲಿ ಮಾಡಿದಾಗ ಗಿರಣಿಯ ಕೆಲಸಗಾರರನ್ನು ಕರೆದು ಅವರ ಯೋಗಕ್ಷೇಮಗಳನ್ನು ವಿಚಾರಿಸಿ ಉಪಚಾರ ಮಾಡಿ ಕಳುಹಿಸುತ್ತಿದ್ದರು. ಗಿರಣಿಯಲ್ಲಿ ಮುಖ್ಯಸ್ಥನಾಗಿದ್ದ ಶಾಂತಯ್ಯನೂ ಮನೆಯಲ್ಲಿ ಒಬ್ಬನ ಹಾಗೆಯೇ ಆಗಿಬಿಟ್ಟಿದ್ದ.

ತಾವು ಊರಲ್ಲಿಲ್ಲದಾಗ ಗಿರಣಿಯ ಆಡಳಿತವನ್ನು ರಾಮುಪ್ಪನಿಗೇ ಬಿಟ್ಟು ಹೊರಡುತ್ತಿದ್ದರು. ರಾಮುಪ್ಪನಿಗೆ ಗಿರಣಿಯಲ್ಲಿಯೂ ಮನೆಯಲ್ಲಿಯೂ

ಸಂಪೂರ್ಣ ಸ್ವಾತಂತ್ರ್ಯವಿತ್ತು. ಬೇರೆ ಕಡೆಯಿಂದ ಹೆಣ್ಣು ತಂದರೆ ತಮ್ಮ ಮತ್ತು ರಾಮಪ್ಪನ ಸಂಬಂಧವು ದೂರವಾಗಬಹುದೆಂದು ಭಾವಿಸಿ ಸುಶೀಲೆ ಯನ್ನೇ ರಾಮುವಿಗೆ ತಂದಿದ್ದರು. ಬರಬರುತ್ತಾ ರಾಯರು ಅನೇಕ ಕಾರ್ಯ ಗಳಿಗೆ ಕೈಹಾಕಬೇಕಾಯಿತು. ರಾಯರಿಗೆ ಅರಿವಾಗದಂತೆಯೇ ಅನೇಕ ಸಾರ್ವಜನಿಕ ಸಂಸ್ಥೆಗಳು ಅವರನ್ನು ಅಂಟಿಕೊಂಡವು. ಹೀಗಾಗಿ ತಮ್ಮ ವೇಳೆಯನ್ನು ಗಿರಣಿಯ ವಿಷಯವೊಂದರಲ್ಲೇ ವಿನಿಯೋಗಮಾಡಲು ಅವಕಾಶ ದೊರೆಯುತ್ತಿರಲಿಲ್ಲ. ಎಂತಲೇ ರಾಮಪ್ಪನನ್ನೂ ಅನಂತಯ್ಯನನ್ನೂ ಅದರ ಮೇಲ್ವಿಚಾರಣೆಗೆ ನೇಮಿಸಿದ್ದರು. ಅನಂತಯ್ಯ ಪಾರ್ವತಮ್ಮನವರ ಚಿಕ್ಕಮ್ಮನ ಮಗ. ಆದರೆ ಅವನನ್ನು ಚಿಕ್ಕಂದಿನಿಂದಲೂ ಪಾರ್ವತಮ್ಮನವರ ತಂದೆಯೇ ಸಾಕಿದ್ದರು. ಪಾರ್ವತಮ್ಮನವರ ತಂದೆಯು ಕಾಲವಾದ ನಂತರ ತಂಗಿಯ ಮನೆಗೇ ನೇರವಾಗಿ ಬಂದು ಬಿಡಾರ ಹೂಡಿದನು. ಅನಂತಯ್ಯನೊಬ್ಬ ಏಕೆ, ದೂರದ ಬಳಗದವರಿಗೆಲ್ಲಾ ಇವರು ಹತ್ತಿರದ ಸಂಬಂಧಿಗಳಾದರು

ಆದರೆ ಇದ್ದಕ್ಕಿದ್ದ ಹಾಗೆಯೇ ರಾಯರು ಕರುಳಿನ ಬೇನೆಯಿಂದ ನರಳ ಲಾರಂಭಿಸಿದರು. ಡಾಕ್ಟರುಗಳೇನೋ ಖಾಯಿಲೆಯು ಮಹತ್ವದಲ್ಲವೆಂದೂ, ರಾಯರು ಬೇಗನೆ ಗುಣಮುಖರಾಗುವರೆಂದೂ ತಿಳಿಸಿದರು. ಆದರೆ ಪಾರ್ವತಮ್ಮನವರು ಮಾತ್ರ ಭೂಮಿಯ ಮೇಲೆ ಇದ್ದಂತೆ ಕಾಣುತ್ತಿರಲಿಲ್ಲ. ಊರಿನಲ್ಲಿದ್ದ ಸಣ್ಣ ಪುಟ್ಟ ಹನುಮಂತರಾಯನ ಗುಡಿಯಿಂದ ತಿರುಪತಿ ವೆಂಕಟಾಚಲಪತಿಯ ವರೆಗೂ ಕಪ್ಪ ಕಾಣಿಕೆಗಳನ್ನು ಹಾಕಿ ತಮ್ಮ ಪತಿಗೆ ಗುಣವಾದ ನಂತರ ತಾವೇ ಖುದ್ದಾಗಿ ತೀರ್ಥಯಾತ್ರೆ ಮಾಡುವುದಾಗಿ ಸಂಕಲ್ಪಿಸಿದ್ದರು. ಆದರೆ ಆ ದೇವರುಗಳಿಗೆ ಹರಕೆ ಕೇಳಿಸಲಿಲ್ಲವೋ ಅಥವಾ ಈಕೆಯ ಕಾಣಿಕೆಯ ಸ್ವೀಕಾರಕ್ಕೆ ಒಪ್ಪಲಿಲ್ಲವೋ........ಅಂತೂ ರಾಯರು ಗುಣಮುಖರಾಗುವುದರ ಬದಲು ಹೆಚ್ಚಾಗಿ ನರಳಹತ್ತಿದರು.

ಪತಿಯ ರೋಗಶಯ್ಯೆಯನ್ನು ಬಿಟ್ಟು ಪಾರ್ವತಮ್ಮನವರು ತೆರಳುತ್ತಲೇ ಇರಲಿಲ್ಲ. ನಿದ್ರೆ ಇಲ್ಲದೆ ಕಂಗೆಟ್ಟುಹೋಗಿದ್ದರು. ವೈದ್ಯರಂತೂ ರಾಯರು ಗುಣಮುಖರಾಗುತ್ತಿದ್ದಾರೆಂದು ಅಂದು ಸೂಚನೆಯಿತ್ತಿದ್ದರು. ಆ ಸಂತೋಷ ಸೂಚನೆಯು ಎಲ್ಲರಿಗೂ ಹರ್ಷವನ್ನುಂಟುಮಾಡಿತು. ಅದರಂತೆಯೇ

ಹಗಲಿರುಳು ನಿದ್ರೆ ಕೆಟ್ಟಿದ್ದ ಪಾರ್ವತಮ್ಮನವರು ಕೆಲವು ಕಾಲ ಕಣ್ಣು ಮುಚ್ಚಿ ಬರೋಣವೆಂದು ಪಕ್ಕದ ಕೋಣೆಗೆ ತೆರಳಿದರು.

ಮಧ್ಯರಾತ್ರಿಯ ಹೊತ್ತಿಗೆ ಇದ್ದಕಿದ್ದ ಹಾಗೆಯೇ ರಾಯರಿಗೆ ಬೇನೆಯು ಜಾಸ್ತಿಯಾಯಿತು. ಸುತ್ತಲೂ ನೋಡಿ 'ಪಾತೂ! ಪಾತೂ!' ಎಂದು ಕೂಗತೊಡಗಿದರು. ಹತ್ತಿರದಲ್ಲೇ ಇದ್ದ ರಾಯರ ದೊಡ್ಡ ಅಕ್ಕ ತಮ್ಮನ ತಲೆಯನ್ನು ತಮ್ಮ ತೊಡೆಯ ಮೇಲೆ ಇರಿಸಿಕೊಂಡರು. ಅಷ್ಟು ಹೊತ್ತಿಗಾಗಲೇ ರಾಯರು ಉಸಿರಾಡುವುದು ಕಮ್ಮಿಯಾಗುತ್ತಲಿತ್ತು. ಕಣ್ಣುಗಳು 'ಪಾತು'ವಿನ ಬರುವಿಕೆಗಾಗಿ ಬಾಗಿಲ ಕಡೆಗೇ ತಿರುಗಿದವು. ಹತ್ತಿರದವರು ಓಡಿಹೋಗಿ ಒಂದೆರಡು ತುಳಸೀದಳ ಮತ್ತು ಗಂಗೋದಕವನ್ನು ತಂದು ರಾಯರ ಬಾಯಲ್ಲಿ ಬಿಟ್ಟರು. ಮರುಕ್ಷಣದಲ್ಲಿಯೇ ರಾಯರ ಜೀವಜ್ಯೋತಿ ನಂದಿಹೋಯಿತು.

'ಪಾತಿ ನಿನ್ನ ಕುಂಕುಮವನ್ನು ಅಳಿಸಿಬಿಟ್ಟು ಹೋದನಲ್ಲೇ!' ಎಂದು ಕೂಗಿದಾಗಲೇ ಅವರಿಗೆ ಹಿಡಿದಿದ್ದ ಜೊಂಪು ಹರಿದಿದ್ದು.

## ಎರಡು

ದಿನಗಳು ಉರುಳಿದಂತೆಲ್ಲಾ ಪಾರ್ವತಮ್ಮನವರ ಹೊರಗಿನ ಉದ್ವೇಗ ಕಡಿಮೆಯಾಗುತ್ತಿತ್ತು. ಆದರೆ ಅವರ ಹೃದಯದ ವ್ಯಥೆ ಚಿರವಾಗಿ ನೆಲೆಸಿತ್ತು. ತಮ್ಮ ಇಬ್ಬರು ಮಕ್ಕಳ ಅನಾಥ ಸ್ಥಿತಿ ಅವರನ್ನು ಚಿಂತೆಗೆ ಗುರಿಮಾಡಿತ್ತು. ಅವರಿಗಾಗಿ ಭೂಮಿಯ ಮೇಲಿರಬೇಕಾಯಿತು. ಸಂಸಾರದ ಭಾರವನ್ನು ಹೊರಬೇಕಾಯಿತು.

ರಾಯರು ತಾವು ಗಳಿಸಿದ್ದ ಆಸ್ತಿಯನ್ನು ಅಲ್ಲಲ್ಲಿಯೇ ಧರ್ಮಕಾರ್ಯಗಳಿಗೆ ವಿನಿಯೋಗಿಸುತ್ತಿದ್ದರು. ಸಾಯುವ ವೇಳೆಗೆ ಸ್ವಲ್ಪ ಭೂಮಿ, ಮನೆ ಮತ್ತು ಗಿರಣಿಯನ್ನು ಮಾತ್ರ ಅವರು ತಮ್ಮದಾಗಿ ಬಿಟ್ಟುಹೋದರು. ಜೀವನವನ್ನು ಸುಲಭವಾಗಿ ಸಾಗಿಸಬಹುದೆಂದು ಪಾರ್ವತಮ್ಮನವರು ತಿಳಿದಿದ್ದರು. ಆದರೆ ಬರುತ್ತಿದ್ದ ವರಮಾನವೆಲ್ಲವೂ ಗಿರಣಿಯಿಂದಲೇ. ಗಿರಣಿಯನ್ನು ತಮ್ಮದನ್ನಾಗಿ ಮಾಡಿಕೊಂಡು ನಡೆಯಿಸುವ ಧೈರ್ಯವಿರಲಿಲ್ಲ

ಅವರಿಗೆ. ತನ್ನ ಪತಿಯು ಜೀವದ ಜೀವನವನ್ನಾಗಿ ಕಾಣುತ್ತಿದ್ದ ಆ ಗಿರಣಿಯನ್ನು ಮಾರುವ ಆಸೆಯೂ ಆಕೆಗೆ ಇರಲಿಲ್ಲ.

ಇಂಥ ಸಮಯದಲ್ಲಿ ರಾಮಪ್ಪನು ಸಂಸಾರದ ಭಾರವನ್ನು ಹೊರಲು ಯತ್ನಿಸುತ್ತೇನೆಂಬದ್ದು ಎಲ್ಲರಿಗೂ ಆನಂದವನ್ನುಂಟುಮಾಡಿತು. ರಾಯರ ಕರ್ಮಾದಿಗಳನ್ನಂತೂ ರಾಮಪ್ಪನೇ ನಿಂತು ಸಾಂಗವಾಗಿ ನೆರವೇರಿಸಿದನು. ಎಲ್ಲರ ಬಾಯಲ್ಲಿಯೂ ರಾಮಪ್ಪನು ನಡೆಸಿದ ಆ ಕರ್ಮದ ಮಾತೇ ಆಗಿತ್ತು. ಆ ಮೃಷ್ಟಾನ್ನ ಭೋಜನವೇನು! ಭೂರಿ ದಕ್ಷಿಣೆಯ ಸಂಭ್ರಮವೇನು! ಊಟದ ಹಾರಾಟ ದಿನಕ್ಕೆ ಐದಾರುಸಾರಿ ಎಲೆ ಹಾಕಿದರೂ ಮುಗಿಯುತ್ತಿರಲಿಲ್ಲ. ಕೊನೆಯಲ್ಲಿ ಉಪಗತರ ಆತ್ಮಕ್ಕೆ ಶಾಂತಿ ದೊರೆಯಲೆಂದು ಬ್ರಾಹ್ಮಣರಿಗೆ ಒಂದು ಸೇರು ಹಾಲು ಕರೆಯುವ ಗೋವನ್ನು ದಾನ ಕೊಡಲು ಬ್ರಾಹ್ಮಣರೆಲ್ಲರೂ ಏಕಕಂಠದಿಂದ 'ರಾಯರಿಗೆ ಮೋಕ್ಷ ದೊರಕಿಸಿ ಕೊಟ್ಟೆಯಪ್ಪಾ' ಎಂದು ರಾಮಪ್ಪನನ್ನೂ ಗಗನಕ್ಕೇರಿಸಿದರು. ಎಲ್ಲರೂ, ರಾಯರು ಹೋದರೂ ಸದ್ಯ ರಾಮಪ್ಪನಿದ್ದಾನಲ್ಲಾ ಎಂದು ಸಮಾಧಾನ ಪಡೆಯುತ್ತಿದ್ದರು.

ರಾಮಪ್ಪನು ಕ್ರಮೇಣವಾಗಿ ಸಂಸಾರದ ಸೂತ್ರ ತನ್ನ ಕೈಗೆ ತೆಗೆದುಕೊಳ್ಳಲು ಯತ್ನಿಸಿದ. ಮನೆಯಲ್ಲಿನ ಕಾರ್ಯಗಳು ರಾಯರಿದ್ದಾಗ ಇದ್ದ ವೈಭವಕ್ಕಿಂತಲೂ ಹೆಚ್ಚಾಗಿ ನಡೆಸುತ್ತಿದ್ದ. ಪಾರ್ವತಮ್ಮನವರೇನಾದರೂ 'ಮಗೂ, ಸ್ವಲ್ಪ ಮಿತವಾಗಿ ನಡೆಸು' ಎಂದೇನಾದರೂ ಹೇಳಿದರೆ 'ಚಿಕ್ಕಮ್ಮಾ, ಚಿಕ್ಕಪ್ಪ ಇರುವ ವರೆಗೆ ಮಾತ್ರ ಸುಖವಾಗಿರಬೇಕೋ........ ಈಗ ನಾವೇನು ನರಳಬೇಕೋ' ಎಂದು ಸ್ವಲ್ಪ ಗಡುಸಾಗಿಯೇ ಉತ್ತರ ಹೇಳುತ್ತಿದ್ದನು. ಅವನ ಮನಸ್ಸು ನೋಯಿಸಬಾರದೆಂದು ಪಾರ್ವತಮ್ಮನವರು ಏನನ್ನೂ ಹೇಳುತ್ತಿರಲಿಲ್ಲ.

ಬರಬರುತ್ತಾ ಮನೆಯಲ್ಲಿ ವೈಮನಸ್ಸುಗಳು ಬೆಳೆಯತೊಡಗಿದವು. ರಾಮಪ್ಪ, ಅನಂತಯ್ಯ ಮತ್ತು ಶಾಂತಯ್ಯ ಇವರೆಲ್ಲಾ ಒಂದು ಗುಂಪು. ಪಾರ್ವತಮ್ಮನವರೇ ಇವರ ಎದುರುವಾದಿಗಳು. ಆ ಮೂವರು ಮಿತ್ರರು ಪಾರ್ವತಮ್ಮನವರಿಂದ ಗಿರಣಿಯ ಯಜಮಾನಿಕೆಯನ್ನು ಪಡೆಯಲು ಯತ್ನಿಸತೊಡಗಿದರು. ಅನಂತಯ್ಯನೇನೋ ಪಾರ್ವತಮ್ಮನವರ ಚಿಕ್ಕಪ್ಪನ ಮಗನೇ,

ಆದರೆ ರಾಮಪ್ಪನು ಅವರಿಗೆ ತೋರಿಸುತ್ತಿದ್ದ ಹಣದ ಆಸೆಯಿಂದ ರಾಮಪ್ಪನ ಕಾರ್ಯಗಳಿಗೆ 'ಹೂ' ಎನ್ನುತ್ತಿದ್ದನು. ರಾಯರಿದ್ದಾಗಲೇ ಅನಂತಯ್ಯನು ಒಂದು ಚಿಲ್ಲರೆ ಅಂಗಡಿ ಇಟ್ಟಿದ್ದ. ಅದರಿಂದ ಬರುತ್ತಿದ್ದ ದುಡ್ಡು ಅಂಗಡಿಯ ಬಾಡಿಗೆಗೂ ಸಾಕಾಗುತ್ತಿರಲಿಲ್ಲ. ತಂದೆ ಕಾಲವಾಗುತ್ತಲೂ ಅನಂತಯ್ಯ ರಾಯರ ಆಶ್ರಯವನ್ನೇ ಹಿಡಿದ. ರಾಯರ ಮನೆಗೆ ಬಂದ ಮೇಲೆ ಹೊಟ್ಟೆಗೆ ಬಟ್ಟೆಗೆ ತಾಪತ್ರಯವಿರಲಿಲ್ಲ. ಆದರೆ ಆತ ಬೇರೊಂದು ಮಾರ್ಗಕ್ಕೆ ಇಳಿದಿದ್ದ. ತನ್ನ ಹೆಂಡತಿ ಕಾಲವಾದಂದಿನಿಂದಲೂ ವಿಲಾಸದ ಕಡೆಗೆ ಹೆಚ್ಚು ಗಮನ ಕೊಡುತ್ತಿದ್ದ. ರಾಯರ ಮನೆಯನ್ನು ಸೇರಿದ ದಿನವೇ ತನ್ನ ಅಂಗಡಿಯನ್ನು ಮಾರಿ ಬಂದ ದುಡ್ಡನ್ನೆಲ್ಲಾ ವಿಲಾಸದಲ್ಲಿ ಕಳೆದಿದ್ದ. ಈ ವಿಚಾರ ತಿಳಿಯುತ್ತಲೂ ರಾಯರು ಅನಂತಯ್ಯನನ್ನು ಚೆನ್ನಾಗಿ ಗದರಿಸಿದ್ದರು. ಪಾರ್ವತಮ್ಮನವರಿಗೆ ತಿಳಿಯದಂತೆ ಅವನಿಗೆ ಚೆನ್ನಾಗಿ ಬುದ್ಧಿ ಹೇಳಿದ್ದರು. ರಾಯರಿಗೆ ಹೆದರಿಕೊಂಡು ತನ್ನ ವಿಲಾಸವನ್ನು ಆತ ಕಡಿಮೆ ಮಾಡಿದ್ದ. ಅವರ ಆಶ್ರಯ ಬಿಟ್ಟರೆ ಹೊಟ್ಟೆಗೆ ಕಲ್ಲು ಬೀಳುವುದೆಂದು ಹೆದರಿ ಹೆಚ್ಚಿನ ಹವ್ಯಾಸಕ್ಕೆ ಹೋಗುತ್ತಿರಲಿಲ್ಲ. ಆದರೆ ಕೆಲವೊಂದು ದಿನಗಳಲ್ಲಿ ತನ್ನ ಚಪಲವನ್ನು ತಡೆದುಕೊಳ್ಳಲಾಗದಿದ್ದಾಗ ಪಾರ್ವತಮ್ಮನವರ ಕಾಲಿಗೆ ದಮ್ಮಯ್ಯ ಗುಡ್ಡೆಹಾಕಿ, ಸುಳ್ಳು ನೆವ ಹೇಳಿ ದುಡ್ಡು ಕಸಿದು ವಿಲಾಸದಲ್ಲಿ ಕಳೆಯುತ್ತಿದ್ದನು.

ರಾಯರು ಮಡಿದ ನಂತರ, ರಾಮಪ್ಪನನ್ನು ಆಶ್ರಯಿಸಲು ಹವಣಿಸುತ್ತಿದ್ದನು. ಅವನಿಗೆ ಅನಂತಯ್ಯನ ಗುಣವೆಲ್ಲವೂ ಗೊತ್ತಿತ್ತು. ಎಂತಲೇ ಕೀಳು ಆಸೆಗೆ ಸಹಾಯ ಮಾಡಿ ಅವನನ್ನು ತನ್ನ ಕಡೆಗೇ ಸೆಳೆದುಕೊಂಡಿದ್ದ.

ಶಾಂತಯ್ಯ ಕಿಲಾಡಿ. ರಾಯರಿಗೆ ಅಚ್ಚುಮೆಚ್ಚಿನವನಾಗಿ ಅವರ ಮನೆಯಲ್ಲೊಬ್ಬನ ಹಾಗೆಯೇ ಇದ್ದ. ಮುಂಚೆ ಒಂದು ಹೊತ್ತಿಗೇ ಸರಿಯಾಗಿ ಹಿಟ್ಟು ಸಿಗುವುದು ಕಷ್ಟವಾಗುತ್ತಿತ್ತು. ರಾಯರ ಕರುಣಕಟಾಕ್ಷ ಇವನನ್ನು ಉದ್ಧಾರ ಮಾಡಿತು. ಹೆಸರಿಗೆ ಗಿರಣಿಯ ನೌಕರನಾಗಿದ್ದರೂ ಮನೆಯ ಅಂತರಂಗದಲ್ಲಿ ನಿಕಟ ಸಂಬಂಧವನ್ನು ಬೆಳಸಿದ್ದ. ರಾಯರಿಗೆ ಬೇಕಾದವನಾಗಿ ಅವರು ನಕ್ಕಾಗ ಸಂತೋಷದಿಂದಿರುತ್ತಾ, ಅವರು ವ್ಯಸನದಲ್ಲಿದ್ದಾಗ ತನ್ನ ತಲೆಯ ಮೇಲೆ ಆಕಾಶವೇ ಬಿದ್ದಂತೆ ನಟಿಸಿ ದುಡ್ಡನ್ನು ಸಂಪಾದಿಸು

ತ್ತಿದ್ದನು. ರಾಯರು ಎಂದು ಮಡಿದರೋ ಅಂದಿನಿಂದ ಅವನಿಗೆ ಮಹಾ ಯೋಚನೆಗೆ ಪ್ರಾರಂಭವಾಯಿತು. ಆದರೆ ರಾಮಪ್ಪನಿಗೆ ಸೊಪ್ಪು ತಿನ್ನಿಸುವ ದಾರಿ ಅವನಿಗೆ ಚೆನ್ನಾಗಿ ತಿಳಿದೂ ಇತ್ತು.

ಆ ದಿನ ಮಧ್ಯಾಹ್ನ ಗಿರಣಿಯ ಕಚೇರಿಯಲ್ಲಿ ಮೂವರು ಮಿತ್ರರ ಏಕಾಂತ ನಡೆಯಿತು. ಪಾರ್ವತಮ್ಮನವರಿಂದ ಗಿರಣಿಯನ್ನು ಪಡೆಯುವ ತಂತ್ರಸಾಧನೆಗೆ ಮನಸ್ಸು ಕೊಟ್ಟಿದ್ದರು. ತಾನು ಮುಂದೆ ಗಿರಣಿಯ ಮಾಲೀಕನಾಗಬಹುದೆಂಬ ಆಸೆಯಲ್ಲಿ ರಾಮಪ್ಪ ಮುಳುಗೇಳುತ್ತಿದ್ದ. ಗೆಳೆಯರಿಬ್ಬರೂ ಅವನನ್ನು ಹುರಿದುಂಬಿಸುತ್ತಿದ್ದರು. ರಾಯರು ಮಡಿದ ನಂತರ ಗಿರಣಿಯ ಮಾಲೀಕತನವು ಪಾರ್ವತಮ್ಮನವರ ಹೆಸರಿನಲ್ಲಿತ್ತು. ಮೊದಲು ಮನೆಯ ಆಡಳಿತವನ್ನು ವಶಕ್ಕೆ ತೆಗೆದುಕೊಂಡರೆ, ಅನಂತರ ಗಿರಣಿಯ ಆಡಳಿತವನ್ನು ಪಡೆಯಬಹುದೆಂದು ರಾಮಪ್ಪ ನಂಬಿದ್ದ. ಎಂತಲೇ ಮನೆಯ ವಿಷಯದಲ್ಲಿ ಅವನು ಆಸಕ್ತಿ ತೋರುತ್ತಿದ್ದುದು. ಪಾರ್ವತಮ್ಮನವರಿಗೆ ಬಹಳ ಸಂತೋಷವೇನೋ ಆಯಿತು. ಮೊದಲಿನಿಂದಲೂ ಮಗನೆಂದು ಸಾಕಿ ಸಲಹಿದುದಕ್ಕೆ ಸಾರ್ಥಕವಾಯಿತೆಂದೇ ಬಗೆದರು. ಆದರೆ ರಾಮಪ್ಪನ ಮನಸ್ಸಿನಲ್ಲಿದ್ದ ದುರ್ಭಾವನೆಯು ಅವರಿಗೆ ತಿಳಿಯಲಿಲ್ಲ.

ಪಾರ್ವತಮ್ಮನವರನ್ನು ತನ್ನ ಬಲೆಗೆ ಸುಲಭದರಲ್ಲಿ ಹಾಕಿಕೊಂಡೆನೆಂದು ತಿಳಿದ ರಾಮಪ್ಪ ಗಿರಣಿಯನ್ನು ತನ್ನ ಹೆಸರಿಗೆ ಬರೆದು ಕೊಡುವಂತೆ, ಒಂದು ದಿನ ಪಾರ್ವತಮ್ಮನವರ ಮುಂದೆ ಪ್ರಸ್ತಾಪ ಮಾಡಿದನು. ಗಿರಣಿಯು ಅವರ ಹೆಸರಿನಲ್ಲಿದ್ದರೆ ಆಡಳಿತ ಕಷ್ಟವಾಗುವುದೆಂದೂ, ಅದಕ್ಕೋಸ್ಕರ ಅದನ್ನು ತನ್ನ ಹೆಸರಿಗೇ ಮಾಡಿಕೊಡಬೇಕೆಂದೂ ಕೇಳಿದ. ಅವರಿಗೆ ಆ ಸೂಚನೆಯ ನಿಜವಾದ ಅರ್ಥ ಹೊಳೆಯಲಿಲ್ಲ. ರಾಮಪ್ಪ ತಾನು ಏನು ಮಾಡುತ್ತಿದ್ದರೂ ಅವರ ಸಲಹೆ ಕೇಳುತ್ತಿದ್ದ. ಆದುದರಿಂದ ಗಿರಣಿಯ ವಿಷಯದಲ್ಲಿ ಪದೇ ಪದೇ ಬಂದು ಸಲಹೆ ಪಡೆಯಲು ರಾಮಪ್ಪ ಇಷ್ಟಪಡೆಯದೆ ಹೀಗೆ ಹೇಳಿರಬಹುದೆಂದು ತಿಳಿದರು. ಅಂತೆಯೇ, ಅಂದಿನಿಂದ ಗಿರಣಿಯ ಅಧಿಕಾರವೆಲ್ಲಾ ಸಂಪೂರ್ಣವಾಗಿ ರಾಮಪ್ಪನದೆಂದೇ ತಿಳಿಸಿ, ತಮ್ಮ ಹೆಸರಿನಲ್ಲಿ ಗಿರಣಿ ಇರುವುದರಿಂದ ಸಂಕೋಚಪಟ್ಟುಕೊಳ್ಳಬಾರದೆಂದರು. ರಾಮಪ್ಪನಿಗೆ ನಿರಾಶೆಯಾದರೂ ತನ್ನ ಆಸೆಯನ್ನು ತ್ಯಜಿಸಲಿಲ್ಲ. ತನ್ನ ಆಪ್ತರೊಡನೆ ಈ ವಿಚಾರ

ವನ್ನು ಪ್ರಸ್ತಾಪಿಸಿದನು. ಅವರಿಬ್ಬರೂ ಅವನ ಅಭಿಪ್ರಾಯ ಸರಿ; ಹೆಂಗಸಾದವಳು ಗಿರಣಿ ನಡೆಸುವುದು ಅಸಾಧ್ಯ ಎಂದರು.

'ಹಾಗಾದರೆ ಅವಳಿಂದ ಹೇಗೆ ಪಡೆಯುವುದು ? ನನಗೇನೋ ಚಿಕ್ಕಮ್ಮನನ್ನು ಇನ್ನೊಂದು ಸಾರಿ ಈ ವಿಚಾರದಲ್ಲಿ ಪ್ರಸ್ತಾಪಿಸುವುದು ಸರಿಯೆಂದು ಕಾಣುವುದಿಲ್ಲ' ರಾಮಪ್ಪನು ಶಾಂತಯ್ಯನ ಕಡೆಗೆ ತಿರುಗಿ ನೋಡಿದನು.

ಶಾಂತಯ್ಯ ಸ್ವಲ್ಪ ಯೋಚಿಸಿದಂತೆ ನೋಡಿ 'ರಾಮಪ್ಪಾ, ನೀವು ನಿಮ್ಮ ಚಿಕ್ಕಮ್ಮ ಒಳ್ಳೆಯವರೆಂದು ತಿಳಿದಿರಬಹುದು. ಅವರ ಮನಸ್ಸಿನಲ್ಲಿರುವುದು ನಿಮಗೆ ತಿಳಿಯದು. ಗಿರಣಿಯನ್ನು ತಮ್ಮ ಕೈಯಿಂದ ನಡೆಸುವುದು ಅಸಾಧ್ಯ ಎಂದು ಆಕೆಗೆ ಗೊತ್ತು. ಒಂದೆರಡು ಒಳ್ಳೆ ಮಾತನ್ನಾಡಿದರೆ, ನೀವು ಅದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತೀರೆಂದು ಅವರ ಭಾವನೆ........ನಾನೇ ಕೇಳುತ್ತೇನೆ ರಾಮಪ್ಪನವರೇ—ನನಗೂ ನಿಮಗೂ ಏನು ವ್ಯತ್ಯಾಸ ಎಂದು. ಸಂಬಳ ಎಂದು ಹೇಳಿ ನಮಗೆ ದುಡ್ಡು ಕೊಡುತ್ತೀರಿ. ಆದರೆ ನೀವು ಹಾಗೆಯೇ ನಿಮ್ಮ ಖರ್ಚಿಗೆ ಹಣವನ್ನು ತೆಗೆದುಕೊಳ್ಳುತ್ತೀರಿ. ಅಷ್ಟೇ........'

'ನೀವು ಹೇಳುವುದು ಸರಿ ಶಾಂತಯ್ಯ........ಆದರೆ ಗಿರಣಿಯನ್ನು ಉಪಾಯದಿಂದ ಪಡೆಯುವ ಪ್ರಯತ್ನದಲ್ಲಿ ತೊಡಗೋಣ. ಚಿಕ್ಕಮ್ಮನ ಹತ್ತಿರ ಗಲಬೆ ಮಾಡಿ ಕಿತ್ತುಕೊಳ್ಳಲು ಮನಸ್ಸು ಒಪ್ಪುವುದಿಲ್ಲ.'

ಇಷ್ಟು ಹೊತ್ತು ಸುಮ್ಮನಿದ್ದ ಅನಂತಯ್ಯನು 'ರಾಮಪ್ಪಾ ನನಗೊಂದು ಯೋಚನೆ ಹೊಳೆದಿದೆ, ಅದರಂತೆ ಕಾರ್ಯ ಕೈಕೊಂಡರೆ ನಿನ್ನ ಉದ್ದೇಶ ನೆರವೇರಬಹುದು' ಎಂದ.

'ಏನು ನಿನ್ನ ಯೋಚನೆ ?'

'ನೋಡು,........ಗಿರಣಿಯ ಮೇಲೆ ಸ್ವಲ್ಪ ಸಾಲ ಬೀಳುವ ಹಾಗೆ ಮಾಡು. ಗಿರಣಿ ಆಕೆಯ ಹೆಸರಿನಲ್ಲಿರುವುದರಿಂದ ಸಾಲದ ತಕರಾರು ಅವಳನ್ನು ಕಾಡುವುವು. ಆಗ ಅವಳನ್ನು ಪುಸಲಾಯಿಸಿ ಗಿರಣಿಯನ್ನು ನಿನ್ನ ಹೆಸರಿಗೆ ಮಾಡಿಸಿಕೊಳ್ಳಬಹುದು' ಎಂದು ಶಾಂತಯ್ಯನ ಕಡೆಗೆ ತಿರುಗಿ 'ಈ ಉಪಾಯ ಹೇಗೆ ಕಾಣುತ್ತದೆ ಶಾಂತಯ್ಯ' ಎಂದ.

'ಉಪಾಯವೇನೋ ಚೆನ್ನಾಗಿದೆ. ಆದರೆ ಗಿರಣಿಯ ಮೇಲೆ ಈಗ ಸಾಲ ಹೇರುವುದು ಹೇಗೆ . ಉತ್ಪತ್ತಿ ಕಮ್ಮಿ ಎಂದರೆ ಯಾರು ನಂಬುತ್ತಾರೆ?'

'ಅನಂತೂ, ಅಪಪ್ಪಾ ನೀನೇ ಏನಾದರೂ ಉಪಾಯ ಹುಡುಕಿ ಕೊಡಬೇಕು....' ಎಂದ ರಾಮಪ್ಪ.

ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತಯ್ಯ ಹೇಳಿದ 'ನೋಡು, ಈಗ ಹೇಗಾದರೂ ಸೀತಾಲಕ್ಷ್ಮಿಗೆ ಮದುವೆ ವಯಸ್ಸು. ಭಾವ ಇದ್ದಾಗಲೇ ತೊಟ್ಟೀಮನೆ ನಂಜಪ್ಪನ ತಮ್ಮ ರಾಜಶೇಖರನಿಗೆ ಅವಳನ್ನು ಕೊಡಲು ಮಾತುಕತೆಗಳು ನಡೆಯುತ್ತಿದ್ದವು. ನೀನೂ ನಂಜಪ್ಪನವರನ್ನು ನೋಡು. ಅವರು ಒಪ್ಪಿಕೊಂಡೇ ಒಪ್ಪಿಕೊಳ್ಳುತ್ತಾರೆ. ಯಾಕಂದರೆ ಹಿಂದೆಯೇ ಅವರು ಒಪ್ಪಿಕೊಂಡಿದ್ದರು. ಪಾತಿ ಹತ್ತಿರಲೂ ಈ ವಿಚಾರವನ್ನು ಪ್ರಸ್ತಾಪಿಸು. ಅವಳಿಗೂ ಬಹಳ ಸಂತೋಷವಾಗುವುದು. ಮದುವೆಯನ್ನು ನೀನೇ ನೆರವೇರಿಸಿದರೆ ನೀನೆಷ್ಟು ಖರ್ಚುಮಾಡಿದೆಯೆಂದು ಯಾರೂ ನಿನ್ನನ್ನು ಕೇಳುವುದಿಲ್ಲ. ಅನಂತರ ಮದುವೆಯಿಂದ ಗಿರಣಿಯ ಮೇಲೆ ಸಾಲವಾಯಿತೆಂದು ಹೇಳಿ ಮುಂದಿನ ಕಾರ್ಯ ನಡೆಸಬಹುದು.'

ಶಾಂತಯ್ಯನೂ 'ಹೌದು ರಾಮಪ್ಪಾ, ಅದೂ ಒಳ್ಳೇ ಯೋಚನೆಯೇ' ಎಂದ.

ರಾಮಪ್ಪನು ಪಾರ್ವತಮ್ಮನವರಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ. ಸೀತಾಲಕ್ಷ್ಮಿಯ ಮದುವೆಯ ಯೋಚನೆ ಪಾರ್ವತಮ್ಮನವರ ಮನಸ್ಸಿನಲ್ಲಿ ಇದ್ದೇ ಇತ್ತು. ತಾವಾಗೇ ಈ ವಿಷಯವನ್ನಾಡಲು ಹಿಂಜರಿಯುತ್ತಿದ್ದರು. ಸೀತಾಲಕ್ಷ್ಮಿಯ ಮದುವೆ ಯಾವಾಗೆಂದು ಯಾರಾದರೂ ಕೇಳಿದರೆ 'ಸದ್ಯದಲ್ಲೇ' ಎಂದು ಉತ್ತರ ಹೇಳುತ್ತಿದ್ದರು. 'ಗಂಡು ಯಾವುದು........ ಹಿಂದೇನೇ ನೋಡಿದ್ದೀ?' ಎಂದು ಪುನಃ ಪ್ರಶ್ನಿಸಿದರೆ 'ನನಗೇ ಇನ್ನೂ ಗೊತ್ತಿಲ್ಲಾ' ಎಂದು ಉತ್ತರ ಹೇಳುತ್ತಿದ್ದರು. ಇಂತಹ ಸ್ಥಿತಿಯಲ್ಲಿದ್ದಾಗ ರಾಮಪ್ಪ ಮದುವೆಯ ಸುದ್ದಿಯನ್ನು ಎತ್ತಿದ.

'ರಾಮು, ಈ ಎರಡು ಮಕ್ಕಳೂ ನಿನ್ನವೇ. ಅವುಗಳ ಭಾಗ್ಯೋನ್ನತಿಯೇ ನಿನ್ನ ಶ್ರೇಯಸ್ಸು. ಎಲ್ಲವೂ ನಿನ್ನಿಂದಲೇ ಆಗಬೇಕಪ್ಪಾ........

ಅವರಿದ್ದಿದ್ದರೆ ನಿನಗೆ ಈ ಕಷ್ಟ ಇರುತ್ತಿರಲಿಲ್ಲ.' ಎಂದು ಕಣ್ಣುಗಳನ್ನು ತೇವ ಮಾಡಿಕೊಂಡರು ಪಾರ್ವತಮ್ಮ.

'ಹಾಗಲ್ಲ ಚಿಕ್ಕಮ್ಮಾ.... ...ನೀವು ಹಿರಿಯರಲ್ಲವೇ; ನಿಮ್ಮನ್ನು ಕೇಳಿ ನಂಜಪ್ಪನವರ ಮನೆಗೆ ಹೊರಡಬೇಕೆಂದಿದ್ದೇನೆ.'

'ಮಗೂ, ಅವರಿದ್ದಾಗ ನಂಜಪ್ಪನವರು ಆಗಲಿ ಎಂದು ಒಪ್ಪಿಕೊಂಡಿದ್ದರು. ಈಗಲೂ ಇಲ್ಲ ಎಂತ ಅನ್ನಲಾರರು. ನಂಜುಂಡೇಶ್ವರನ ಮೇಲೆ ಭಾರ ಹಾಕಿ ಕೆಲಸ ನಡೆಸೋಣ' ಎಂದು ಪಾರ್ವತಮ್ಮ ಹೇಳಿದರು.

ಸೀತಾಲಕ್ಷ್ಮಿಯ ಮದುವೆಯ ನಿಷ್ಕರ್ಷೆ ಹೆಚ್ಚು ಕಮ್ಮಿ ರಾಯರಿದ್ದಾಗಲೆ ಆಗಿತ್ತು. ಅಂತೆಯೇ ರಾಮಪ್ಪನು ಹೋಗಿ ಕೇಳುತ್ತಲೇ ಒಪ್ಪಿಕೊಂಡರು. 'ಆ ಮಹಾರಾಯ ತಮ್ಮಯ್ಯ..... ..ಅವರ ಮನೆ ಹೆಣ್ಣು ತಂದುಕೊಳ್ಳುವುದು ನಮ್ಮ ಪುಣ್ಯ ಕಣಯ್ಯಾ' ಎಂದು ಮದುವೆಗೆ ವಾಗ್ದಾನ ಮಾಡಿದರು.

ನಂಜಪ್ಪನೂ ದಿವಂಗತ ರಾಯರೂ ಒಂದೇ ಊರಿನವರು. ಚಿಕ್ಕಂದಿನಿಂದಲೂ ಒಟ್ಟಿಗೆ ಆಟಪಾಟದಲ್ಲಿ ಸಮಕಾಲವನ್ನು ಕಳೆದವರು. ಕಾಲದಬ್ಬಿದ ಹಾಗೆಲ್ಲಾ ರಾಯರ ಸ್ಥಿತಿಯು ಅಭಿವೃದ್ಧಿಗೊಳ್ಳುತ್ತಲಿತ್ತು. ಆದರೆ ನಂಜಪ್ಪನವರು ಎಂದಿನಂತೆಯೇ ಬಡವರಾಗಿಯೇ ಉಳಿದರು. ಬಹಳ ಪ್ರಯತ್ನದಿಂದ ಶಾಲಾ ಮಾಸ್ತರಗಿರಿಯನ್ನು ಪಡೆದರು. ತಮ್ಮ ತಮ್ಮನಾದ ರಾಜಶೇಖರನ ಭವಿಷ್ಯವನ್ನು ತಾವೇ ಹೊತ್ತು ನಿಂತರು. ಹಳೆಯ ಸ್ನೇಹಿತರಾದ ತಮ್ಮಯ್ಯನವರ ಮನೆಗೆ ಹೋಗಿ ಬರುತ್ತಿದ್ದಾಗ ರಾಜಶೇಖರನನ್ನೂ ಎಷ್ಟೋ ಸಲ ಜೊತೆಯಲ್ಲಿಯೇ ಕರೆದುಕೊಂಡು ಹೋಗಿದ್ದರು. ಪಾರ್ವತಮ್ಮನವರೂ ರಾಜಶೇಖರನ ಶಾಂತ ಸ್ವಭಾವ ಕಂಡು ಸೀತಾಲಕ್ಷ್ಮಿಗೆ ಅವನು ಸರಿಯಾದ ಜೊತೆಯಾಗುವನೆಂದು ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡಿದ್ದರು. ರಾಯರು ಈ ವಿಚಾರವನ್ನು ಹೇಗೋ ಗ್ರಹಿಸಿ 'ನಂಜಪ್ಪಾ ನನ್ನ ಮಗಳನ್ನು ನಿಮ್ಮ ರಾಜನಿಗೆ ಕೊಡಬೇಕೆಂದಿದ್ದೇನೆ' ಎಂದಾಗ ನಂಜಪ್ಪನವರು 'ಅಗತ್ಯವಾಗಿ' ಎಂದು ನಮ್ರಭಾವದಿಂದ ನುಡಿದಿದ್ದರು. ವಿಶ್ವವಿದ್ಯಾನಿಲಯಕ್ಕೆ ಪ್ರವೇಶಿಸಿದ್ದ ರಾಜಶೇಖರನ ಹೊಣೆ ಹೊರುವುದು ನಂಜಪ್ಪನವರಿಗೆ ಕಷ್ಟಕರವಾಗಿ ಕಂಡಿರಬೇಕು.

ಹೀಗಾಗಿ ರಾಮಪ್ಪ ಬಂದು ಪ್ರಸ್ತಾಪಿಸಿದ ಕೂಡಲೇ ಶುಭಕಾರ್ಯಕ್ಕೆ ತಮ್ಮ ಸಮ್ಮತಿಯನ್ನು ಸೂಚಿಸಿದರು. ಹತ್ತಿರವಾಗಿದ್ದ ಒಂದು ಶುಭಲಗ್ನ ದಲ್ಲಿಯೇ ಮದುವೆಯ ಮುಹೂರ್ತವನ್ನೂ ನಿಶ್ಚಯಿಸಲಾಯಿತು.

## ಮೂರು

ಮದುವೆಯೇನೋ ಬಹಳ ಸಂಭ್ರಮದಿಂದಲೇ ನೆರವೇರಿತು. ಸ್ವಲ್ಪ ಖರ್ಚಿನಲ್ಲೇ ಆಗಬೇಕು—ಇಲ್ಲಸಲ್ಲದ ಆಡಂಬರದಿಂದ ವೃಥಾ ಖರ್ಚು ಆಗಬಾರದೆಂದು ಪಾರ್ವತಮ್ಮನವರು. ರಾಯರ ಹೆಸರಿಗೆ ತಕ್ಕಂತೆ ನಡೆಯ ಬೇಕೆಂದು ರಾಮಪ್ಪನ ಹಠ. 'ಬರೀ ಮೆರವಣಿಗೆಯಲ್ಲೇ ಮುಗಿಸಿಬಿಡಪ್ಪಾ' ಅಂದರೆ, ಬ್ಯಾಂಡು ಸಹಿತವಾದ ಕುದುರೆ ಸಾರೋಟಿನಲ್ಲಿಯೇ ಮೆರವಣಿಗೆ ಯನ್ನು ಮಾಡಿಸಿದನು. ಕೊನೆಯ ದಿನ ಸಾಯಂಕಾಲ ಸುಶ್ರಾವ್ಯವಾದ ಸಂಗೀತಕ್ಕೆ ಏರ್ಪಾಡು ಬೇರೆ. ಎಲ್ಲವೂ ಹೆಚ್ಚಿನ ರೀತಿಯಲ್ಲಿ ನೆರವೇರಿತು.

ಮದುವೆಯಲ್ಲಿ ಅಷ್ಟೇನೂ ಹೆಚ್ಚಿನ ಗಲಾಟೆಗಳು ನಡೆಯಲಿಲ್ಲ. ರಾಯರು ಕಣ್ಮರೆಯಾಗಿರುವುದರಿಂದ ವಿಶೇಷ ರೀತಿಯಲ್ಲಿ ಕಾರ್ಯಗಳು ನಡೆಯುವುದಿಲ್ಲವೆಂದು ಗಂಡಿನ ಕಡೆಯವರು ಭಾವಿಸಿದ್ದರು. ಆದರೆ ರಾಮಪ್ಪನು ವಿಜೃಂಭಣೆಯಿಂದ ನಡೆಸಿದ ರೀತಿಗೆ ಬೆರಗಾದರು.

ಆದರೂ, ತಾಳಿ ಕಟ್ಟುವ ಸಮಯದಲ್ಲಿ ಗಂಡಿನ ಕಡೆಯವರು ಕಿರಿಕಿರಿ ಮಾಡಿದರು. ನಂಜಪ್ಪನವರ ಹೆಂಡತಿ ವೆಂಕಟಸುಬ್ಬಮ್ಮನವರು ಇದ್ದಕ್ಕಿದ್ದ ಹಾಗೆಯೇ ಕೋಪ ಮಾಡಿಕೊಂಡು ತಮ್ಮನ್ನು ತಾವೇ ಬೈದುಕೊಳ್ಳುತ್ತಾ ಅಡಿಗೆಮನೆಯಲ್ಲೇ ಕುಳಿತುಬಿಟ್ಟರು. ಹೆಣ್ಣಿನ ಕಡೆಯವರು ಉಪಚಾರ ಮಾಡುವುದರಲ್ಲಿ ಎಲ್ಲಿ ಕಡಮೆ ಮಾಡಿದೆವೋ ಎಂದು ಯೋಚಿಸತೊಡಗಿದರು. ರಾಮಪ್ಪನು ಚಿಂತಾಭಾವನೆಯನ್ನು ತನ್ನ ಮುಖದ ಮೇಲೆ ಹೊತ್ತು ನಂಜಪ್ಪ ನವರನ್ನು ನಾವು ಏನು ತಪ್ಪು ಮಾಡಿದ್ದರೂ ಕ್ಷಮಿಸಬೇಕೆಂದು ಕೇಳಿಕೊಂಡನು. ಆಗ ತಮ್ಮ ಬೀಗಿತ್ತಿಯ ಕೋಪದ ಕಾರಣ ರಾಮಪ್ಪನಿಗೆ ತಿಳಿಯಿತು. ತಮ್ಮಯ್ಯನವರು ಇದ್ದಾಗ ರಾಜಶೇಖರನ ವಿದ್ಯಾಭ್ಯಾಸದ ಖರ್ಚನ್ನು ಹೊರುತ್ತೇನೆಂದು ಮಾತು ಕೊಟ್ಟಿದ್ದರೆಂದೂ, ಅದರಂತೆಯೇ ಮುಂದೆಯೂ ಇವರುಗಳು ಭರವಸೆ ಕೊಡಬೇಕೆಂದೂ ವಾದಸರಣಿಯನ್ನು ಬಿಚ್ಚಿದರು.

ಇವ್ಯೊಂದನ್ನೂ ಪಾರ್ವತಮ್ಮನವರು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಯಾರೋ ಬಂದು ನಿಮ್ಮ ಬೀಗರು ಬಹಳ ಗೊಂದಲ ಮಾಡುತ್ತಿದ್ದಾರೆಂದು ಹೇಳಿದಾಗ 'ಅಷ್ಟೇ ತಾನೆ, ರಾಜಶೇಖರನು ನಮ್ಮನೇಲೇ ಇದ್ದು ಓದಲಿ. ಅವನ ವಿದ್ಯಾಭ್ಯಾಸದ ಖರ್ಚು ತಾನೇ? ಅದಕ್ಕೇಕೆ ಇಷ್ಟು ಹೋರಾಟ!' ಎಂದು ನುಡಿದರು. ರಾಮಪ್ಪನೂ ಹುಡುಗನ ವಿದ್ಯಾಭ್ಯಾಸಕ್ಕೆ ದ್ರವ್ಯ ಸಹಾಯ ಮಾಡುವುದಾಗಿ ಮಾತು ಕೊಟ್ಟನು. ಮದುವೆಯು ಸುಸೂತ್ರ ವಾಗಿ ನೆರವೇರಿತು.

ರಾಜಶೇಖರನು ಬಿ. ಎ. ತರಗತಿಯಲ್ಲಿ ಓದುತ್ತಿದ್ದ. ಮೊದಲು ಅವನ ವಿದ್ಯಾಭ್ಯಾಸಕ್ಕೆ ಧಕ್ಕೆ ತಗಲಿದ್ದರಿಂದ ಅದು ನಿಧಾನವಾಗಿ ಸಾಗುತ್ತಾ ಬಂತು. ಅಂತೂ 'ಇಂಟರ್‌ಮೀಡಿಯೇಟ್'ಗೆ ಬರುವ ಹೊತ್ತಿಗೆ ಅವನಿಗೆ ಇಪ್ಪತ್ತೆರಡು ವರ್ಷಗಳಾಗಿದ್ದುವು. ಅವನಿಗೆ ಮದುವೆ ಮಾಡಬೇಕೆಂಬ ಉದ್ದೇಶಕ್ಕಿಂತಲೂ ಅವನ ಫೀಜು ಒದಗಿಸುವುದು ಹೇಗೆ ಎಂಬುದೇ ನಂಜಪ್ಪನವರಿಗೆ ಒಂದು ದೊಡ್ಡ ಸಮಸ್ಯೆಯಾಗಿತ್ತು. ರಾಯರಿದ್ದಿದ್ದರೆ ಮದುವೆಯ ವೇಳೆಯಲ್ಲಿ ರಾಜಶೇಖರನ ವಿದ್ಯಾಭ್ಯಾಸದ ಖರ್ಚಿಗಾಗಿ ಗಲಾಟೆ ಮಾಡುತ್ತಿರಲಿಲ್ಲ. ರಾಮಪ್ಪನ ಆಡಳಿತದಲ್ಲಿ ಹೇಗಾಗುವುದೋ ಎಂಬ ಹೆದರಿಕೆ ಅವರ ಮನದಲ್ಲಿ ಮೂಡಿತು. ನಂಜಪ್ಪನವರ ಕುಟುಂಬ ಕೂಡಾ ಈ ವಿಚಾರದಲ್ಲಿ ರಾಮಪ್ಪನ ದೃಢ ಅಭಿಪ್ರಾಯವನ್ನು ತಿಳಿಯಿರಿ ಎಂದು ಬಲವಂತ ಮಾಡತೊಡಗಿದರು. ರಾಮಪ್ಪ ಭರವಸೆ ಕೊಡಲು ಎಲ್ಲವೂ ಶಾಂತವಾಯಿತು.

ಮದುವೆಯ ಮುಹೂರ್ತ ಬೇಗನೆ ಏರ್ಪಾಟಾದದ್ದು ಅನಂತಯ್ಯನಿಂದ. ಅನಂತಯ್ಯನ ಚುಚ್ಚಾಟವಿಲ್ಲದಿದ್ದರೆ, ರಾಮಪ್ಪ ಈ ವಿಚಾರವನ್ನು ಪಾರ್ವತಮ್ಮನವರಲ್ಲಾಗಲೀ ನಂಜಪ್ಪನವರಲ್ಲಾಗಲೀ ಎತ್ತುತ್ತಿರಲಿಲ್ಲ.

ಮದುವೆಯಲ್ಲೂ ಅವನದೇ ಓಡಾಟ ಹೆಚ್ಚು. ದುಡ್ಡಿನ ವಿಚಾರವೇ ಆಗಲಿ—ಜವಳಿಯೇ ಆಗಲೀ, ಚಿನ್ನ ಬೆಳ್ಳಿಯ ವಿಚಾರವೇ ಆಗಲಿ—ಅನಂತಯ್ಯನೇ ತಲೆಹಾಕುತ್ತಿದ್ದ. ತಾನು ಗೊತ್ತುಮಾಡಿದ್ದ ಅಂಗಡಿ ಯಿಂದಲೇ ಜವಳಿ ಮತ್ತು ಇನ್ನಿತರೇ ಸಾಮಾನುಗಳನ್ನು ತರುವಂತೆ ಮಾಡಿದ. ಅನಂತಯ್ಯನ ಮಾತಿಗೆ ಎದುರಾಗಿ ಹೋಗಲು ರಾಮಪ್ಪ ಇಷ್ಟಪಡುತ್ತಿರಲಿಲ್ಲ. ಎಲ್ಲಿಯಾದರೂ ತಾನು ಮಾಡಿದ ಕುತಂತ್ರವನ್ನು ಪಾರ್ವತಮ್ಮನವರಿಗೆ ಹೇಳಿ

ಬಿಟ್ಟಾನೆಂಬ ಭೀತಿ. ಅಂತೂ ಅವರ ಗುಟ್ಟು ಹೆದರಿಕೆಗಳಿಂದ ಚಂದ್ರಳಿಗೆ ಎರಡು ಸೀರೆ, ಚಿಳ್ಳ ಚೈನುಗಳ ಲಾಭವಾಯಿತು.

ಚಂದ್ರಳ ಪರಿಚಯ ಪಡೆದದ್ದು ತನ್ನ ಹಳೆಯ ಗೆಳತಿ ಗುಲಾಬಿಯ ಮನೆಯಲ್ಲಿ. ಹೆಂಡತಿ ಕಾಲವಾದ ಕೆಲವು ದಿನಗಳಲ್ಲೇ ಅನಂತಯ್ಯ ಗುಲಾಬಿಯ ಸ್ನೇಹ ಗಳಿಸಿದ. ದುಡ್ಡಿರುವ ವರೆಗೂ ಆತನನ್ನು ಉಪಚಾರ ದಿಂದ ಕಾಣುತ್ತಿದ್ದ. ಆವಳು ಅವನ ಆರ್ಥಿಕ ಸ್ಥಿತಿ ಕುಗ್ಗಿದಂದಿನಿಂದ ಉದಾ ಸೀನವಾಗಿದ್ದಳು.

ಸೀತಾಲಕ್ಷ್ಮಿಯ ಮದುವೆಗೆ ಕೆಲವು ದಿನಗಳ ಹಿಂದೆ ಗುಲಾಬಿಯ ಮನೆಯಲ್ಲಿ ಬಹಳ ಸಡಗರ. ಅಂದು ಅವಳ ಸಾಕುಮಗಳಾದ ಕಾಂತೆಯ ಮೊದಲನೆಯ ಸೀಮಂತ. ವಿಶೇಷ ರೀತಿಯಿಂದ ಇದನ್ನು ನೆರವೇರಿಸಲು ತನ್ನ ಹಳೆಯ ಮತ್ತು ಇನ್ನೂ ಅನೇಕ ಸ್ನೇಹಿತರುಗಳಿಗೆ ಆಹ್ವಾನ ಕಳುಹಿ ಸಿದ್ದಳು. ಗುಡೇಮಾರನಹಳ್ಳಿ ಜಹಗೀರದಾರರ ಮಗ ಶ್ರೀಕಂಠಯ್ಯ ಅವಳಿಗೆ ಸಹಾಯಕನಾಗಿ ನಿಂತು, ಬಂದವರ ಉಪಚಾರದಲ್ಲಿ ನಿರತನಾಗಿದ್ದ.

ಅನಂತಯ್ಯನೂ ಆಹ್ವಾನಿಸಲ್ಪಟ್ಟಿದ್ದ. ಆಹ್ವಾನಿತರೆಲ್ಲರೂ ಬಹಳ ಉತ್ಸಾಹದಿಂದ ಶ್ರೀಕಂಠಯ್ಯನ ವಿಷಯವಾಗಿ ಮಾತನಾಡುತ್ತಾ ಹರ್ಷ ದಿಂದಿದ್ದರು. ಶೃಂಗಾರ ಲಾವಣ್ಯದಿಂದ ಬಳುಕುತ್ತಿದ್ದ ಕಾಂತೆ, ಅಂದು ರತಿಯನ್ನು ನಾಚಿಸುತ್ತಿದ್ದಳು.

ಅನಂತಯ್ಯನೇನೋ ಈ ಸಡಗರಕ್ಕೆ ಮನಸ್ಸು ಕೊಡಲಿಲ್ಲ. ಕಾಂತ ಳನ್ನು ತಾನು ಮೊದಲು ಒಲಿಸಿಕೊಳ್ಳಬೇಕೆಂದು ಬಹಳ ದಿನಗಳಿಂದಲೂ ಪ್ರಯತ್ನಿಸುತ್ತಿದ್ದ. ಆದರೆ ಹಣವಂತರನ್ನು ತನ್ನ ಬಲೆಗೆ ಬೀಳಿಸಿಕೊಳ್ಳ ಬೇಕೆಂದಿದ್ದ ಗುಲಾಬಿಯ ಸಾಧನೆಯೆಲ್ಲಿ? ಅದು ಬಿಟ್ಟು ಚಂದ್ರಳ ಸಂಗಕ್ಕಾಗಿ ಹಂಬಲಿಸುತ್ತಿದ್ದ ನಿರ್ಗತಿಕ ಅನಂತಯ್ಯನ ಪ್ರಯತ್ನ ಯಾವ ಮೂಲೆಗೆ? ಆದರೂ ನಿರಾಶನಾಗದೆ ಸಡಗರದಿಂದಿದ್ದವನಂತೆ ಅನಂತಯ್ಯ ನಟಿಸುತ್ತಿದ್ದ.

ಘಮಘಮಿಸುತ್ತಿದ್ದ ಸುವಾಸನೆಯು ಇಕ್ಕೆಲದಿಂದಲೂ ಬರುತ್ತಿತ್ತು. ಪುಟ್ಟದಾದರೂ, ಸೌಕರ್ಯದಿಂದೊಡಗೂಡಿದ ಆ ಕೋಣೆಯ ಅಂದಿನ ಶೃಂಗಾರವನ್ನು ಹೆಚ್ಚುವ ಹಾಗೆ ಸುತ್ತಲೂ ಹಾಕಿದ್ದ ರಾಧಾಕೃಷ್ಣ ಮುಂತಾದ ಪಠಗಳು ಪ್ರಯತ್ನಿಸುತ್ತಿದ್ದಂತೆ ಕಾಣುತ್ತಿತ್ತು. ಈ ಎಲ್ಲ

ಉತ್ಸವಗಳ ಮಧ್ಯೆ ತಾರುಣ್ಯದ ವಸಂತ ಮಾಸವನ್ನು ಸಂಭ್ರಮದಿಂದ ಪ್ರವೇಶಿಸುತ್ತಿದ್ದ ಕಾಂತೆಯು ಲಾವಣ್ಯದಿಂದ ಬೆಳಗಿದ್ದಳು. ಆ ವಾತಾವರಣ ಯಾರನ್ನಾದರೂ ಹುಚ್ಚೇಳಿಸುತ್ತಿತ್ತು.

ಕಾಂತೆಗೆ ಆರತಿಯಾದ ಮೇಲೆ ಪಿಟೀಲು ರಂಗಪ್ಪನು ಎರಡು ಕೀರ್ತನೆಗಳಿಂದ ಅಲ್ಲಿದ್ದವರನ್ನು ತಣಿಸಿದನು. ಗುಲಾಬಿಯು, ತನ್ನ ಹಳೆಯ ಸ್ನೇಹಿತಳೂ ಮತ್ತು ತಮ್ಮೂರಿನವಳೂ ಆದ ರಾಜಮ್ಮನ ಮಗಳಾದ ಚಂದ್ರಾ ಸಾನಿಯನ್ನು ಹಾಡಲು ಕೇಳಿಕೊಂಡಳು. ಬಲವಂತ ಜಾಸ್ತಿಯಾಗಲು ಚಂದ್ರ ಹಾಡಲು ಒಪ್ಪಿದಳು.

ಅಷ್ಟು ಹೊತ್ತಿಗಾಗಲೇ ಅನಂತಯ್ಯನ ಮನಸ್ಸು ಚಂದ್ರಳ ಕಡೆ ವಾಲಿತ್ತು. ಇದಕ್ಕೆ ಅವಳ ಬಿನ್ನಾಣವೆಷ್ಟು ಕಾರಣವೋ, ಅಷ್ಟೇ ಕಾಂತಳಿಂದ ನಿರಾಶನಾಗಿ ಗುಲಾಬಿಯಿಂದ ತಿರಸ್ಕರಿಸಲ್ಪಡುತ್ತಿದ್ದುದೂ ಕಾರಣವಾಗಿತ್ತು. ಚಂದ್ರಳ ಇಂಪಾದ ಗಾನ, ವೀಣೆಯನ್ನು ಹಿಡಿದಿದ್ದ ಅವಳ ಭಂಗಿ, ಅವಯವದ ನಯವಾದ ಮಾಟ, ಗಾರುಡಿಗಾರನು ಹಾವನ್ನು ಮಂತ್ರ ಮುಗ್ಧವನ್ನಾಗಿ ಮಾಡಿದಂತೆ ಅನಂತಯ್ಯನನ್ನು ಮಾಡಿಬಿಟ್ಟವು. ಅವಳು ಹಾಡುವುದನ್ನು ನಿಲ್ಲಿಸಿದಾಗಲೇ ಮೈ ಮೇಲಿನ ಎಚ್ಚರಿಕೆ ಬಂದಿತು.

ಗುಲಾಬಿ ಒಬ್ಬಳೇ ಇದ್ದ ಸಮಯ ಸಾಧಿಸಿ 'ಗುಲಾಬಿ, ಈಗ ಹಾಡಿದವಳಲ್ಲಾ ಅವಳು ಯಾರು ?' ಎಂದು ಕೇಳಿದನು.

'ಏನು ಅನಂತಯ್ಯನವರೇ ?........ .. ... ನಮ್ಮನೆ ನಾಕಾಯಿತೆಂದು ತೋರುತ್ತೆ !.... ...ಪಾಪ ! .......ಅಲ್ಲವೆ ? .......'

'ಅದಕ್ಕಲ್ಲಾ ಗುಲಾಬೀ,....... ಅವಳ್ಯಾರು ? ಎಲ್ಲಿದ್ದಾಳೆ ಎಂದಾಕ್ಷಣ ಈ ಅರ್ಥವೇ ? .......ನೋಡು, ಹಾಡು ಎಷ್ಟು ಚೆನ್ನಾಗಿ ಹೇಳಿದಳು.'

'ಹೌ ಹೌದು ರಾಯರೇ ...... ನನಗೆಲ್ಲಾ ಗೊತ್ತು !' ಎಂದು ಮಾತು ಮುಗಿಸುವುದರೊಳಗಾಗಿ ಅಲ್ಲಿಗೆ ಚಂದ್ರಳೇ ಬಂದಳು. ಗುಲಾಬಿ ನಗುತ್ತ 'ರಾಯರು ನಿಮ್ಮ ಮನೆಗೆ ಬರಬೇಕೆಂದಿದ್ದಾರೆ. ಸದ್ಯದಲ್ಲೇ ಥೈಲಿ ಥೈಲಿ ದುಡ್ಡನ್ನು ಹೊರಿಸಿಕೊಂಡು ನಿಮ್ಮ ಮನೆಗೆ ಬರುತ್ತಾರೆ' ಎಂದು ವ್ಯಂಗ್ಯವಾಗಿ ನಕ್ಕಳು. ಅನಂತಯ್ಯನಿಗೆ ತಡೆಯಲಾಗದ ಕೋಪ ಬಂದಿತು. ತನ್ನನ್ನು ಪಾಪರ್ ಎಂದು ಹಂಗಿಸಿ ಮಾತನಾಡುತ್ತಿದ್ದಾಳಲ್ಲಾ ಎಂದು ಹಲ್ಲು ಕಚ್ಚಿದ.

ಆದರೂ ತಡೆದು 'ನೀವ್ಯಾರು ಎಂದು ಕೇಳಿದ್ದಕ್ಕೆ ಎಷ್ಟು ಅವಾಂತರ ಮಾಡು ತ್ತಿದ್ದಾಳೆ' ಎಂದು ಚಂದ್ರಳ ಕಡೆ ತಿರುಗಿದನು. ಚಂದ್ರಳಿಗೆ ಅಲ್ಲಿನ ಪರಿಸ್ಥಿತಿ ವಿಚಿತ್ರವಾಗಿ ಕಂಡುಬಂತು. ಸುಮ್ಮನೆ ನಕ್ಕುಬಿಟ್ಟಳು.

ಅಷ್ಟು ಹೊತ್ತಿಗೆ ಚಂದ್ರಳ ತಾಯಿ ರಾಜಮ್ಮನೂ ಅಲ್ಲಿಗೆ ಬಂದಳು. ರಾಜಮ್ಮನು ಬೆಂಗಳೂರಿಗೆ ಬಂದು ಬಹಳ ದಿನಗಳಾಗಿರಲಿಲ್ಲ. ಆದರೂ ತಾನೂ ಗುಲಾಬಿಯೂ ಒಂದೇ ಊರಿನವರಾದ್ದರಿಂದ ಸ್ನೇಹ ಬೆಳೆಯಿತು. ಗುಲಾಬಿ ಜನ್ಮತಃ ಬೆಲೆವೆಣ್ಣು. ಆದರೆ ಚಂದ್ರ ಕೇವಲ ಕಷ್ಟಗಳಿಂದ ಈ ವೃತ್ತಿಯನ್ನು ಅವಲಂಬಿಸಬೇಕಾಯಿತು. ಹುಟ್ಟಿದ ಊರಲ್ಲಿಯೇ ವಾಸ ವಾಗಿರಲು ಮನಸ್ಸೊಪ್ಪದೆ ಆ ಊರನ್ನು ತ್ಯಜಿಸಿದ್ದಳು. ಬೆಂಗಳೂರಿಗೆ ಬಂದ ಮೇಲೆ ಗುಲಾಬಿ ಮುಂತಾದವರ ಸ್ನೇಹ ಬೆಳೆಯಿತು.

ರಾಜಮ್ಮನು ಬಂದ ಮೇಲೆ ಪುನಃ ಗುಲಾಬಿಯು 'ರಾಜಮ್ಮಾ, ರಾಯರು ಚಂದ್ರಳನ್ನು ಬಹಳವಾಗಿ ವಿಚಾರಿಸುತ್ತಿದ್ದರು' ಎಂದಳು. 'ಆಗಬಹುದು ಅದರಲ್ಲೇನು ತಪ್ಪು?' ಎಂದು ಗುಲಾಬಿಯ ಹಿಂದೆಯೇ ರಾಜಮ್ಮ ತೆರಳಿದಳು ಅವಳ ಹಿಂದೆ ಚಂದ್ರಳೂ ಹೊರಟಳು.

ಅಂದಿನ ಸಡಗರದಲ್ಲೆಲ್ಲಾ ಚಂದ್ರಳ ಮೇಲೆ ಅನಂತಯ್ಯನ ದೃಷ್ಟಿ ನಾಟಿತ್ತು. ಕೊನೆಯಲ್ಲಿ ಅವಳ ಮನೆ ಪತ್ತೆಮಾಡಿ ಮರುರಾತ್ರಿ ಬರುವುದಾಗಿ ತಿಳಿಸಿದನು.

ಮಾರನೆಯ ರಾತ್ರಿ ರಾಜಮ್ಮ, ಚಂದ್ರರೇನೋ ಅನಂತಯ್ಯನ ಆಗಮ ನವನ್ನು ಸಾಧಾರಣ ರೀತಿಯಿಂದ ನಿರೀಕ್ಷಿಸುತ್ತಿದ್ದರು. ಆದರೆ ಅವನ ಕೈಲಿದ್ದ ಚೀಲಗಳನ್ನು ಕಂಡು ಅವನಿಗೆ ಉಪಚಾರದ ಸ್ವಾಗತವನ್ನು ನೀಡಿದರು.

ಒಳಗೆ ಹೋದ ಕೂಡಲೇ ಎರಡು ಕಲಾಪತ್ತಿನ ಸೀರೆ ಮತ್ತು ಒಂದು ಜೊತೆ ಚೈನನ್ನು ಚಂದ್ರಳ ಮುಂದೆ ಇರಿಸಿದ. ಮದುವೆಯ ಜವಳಿ ಮತ್ತು ಒಡವೆಗಳನ್ನು ಕೊಳ್ಳುವ ಗಲಾಟೆಯಲ್ಲಿ ಅನಂತಯ್ಯ ಸಂಪಾದಿಸಿದ್ದ. ಕಾಂತೆಗೆ ಕೊಡಬೇಕೆಂದಿದ್ದ ಅವನ್ನು ಅವಳಿಂದ ನಿರಾಶನಾದುದರಿಂದ ಚಂದ್ರಳಿಗೆ ಕೊಡಲು ನಿರ್ಧರಿಸಿದನು.

ರಾಜಮ್ಮ ಬೆಂಗಳೂರಿಗೆ ಬಂದು ಆರು ತಿಂಗಳಾದರೂ ಅವರ ಆರ್ಥಿಕ ಸ್ಥಿತಿ ಕುಂದಿರಲಿಲ್ಲ. ಯಾವಾಗ ಅನಂತಯ್ಯನಿಂದ ಸೀರೆಗಳೂ ಒಡವೆಗಳೂ ಬಂದವೋ ಆಗ ಅವಳಿಗೆ ಬಹಳ ಸಂತೋಷವಾಯಿತು. ಚಂದ್ರಳ ಮುಖವೂ ಅರಳಿತು. ಅನಂತಯ್ಯನ ಉಲ್ಲಾಸವನ್ನು ಕೇಳುವ ಹಾಗೇ ಇರಲಿಲ್ಲ. ಚಂದ್ರಳೆದುರಿನಲ್ಲಿ ತನ್ನನ್ನು ತಾನೇ ಮರೆತನು ಅದೇ ಸರಿಯಾದ ಸಮಯ ವೆಂದರಿತು ಮೆಲ್ಲನೆ ಚಂದ್ರಳನ್ನೂ ಅನಂತಯ್ಯನನ್ನೂ ಅಲ್ಲಿಯೇ ಬಿಟ್ಟು ರಾಜಮ್ಮ ಹೊರಗೆ ಬಂದಳು.

‡ ‡ ‡ ‡

ರಾಜಮ್ಮನಿಗೆ ಆ ಸೀರೆಗಳು ಹೇಗೆ ಬಂದವೆಂದು ತಿಳಿಯಲು ಬಹಳ ದಿನಗಳು ಹಿಡಿಯಲಿಲ್ಲ ಅನಂತಯ್ಯನೇ ಒಂದು ದಿನ ಉತ್ಸಾಹದಲ್ಲಿದ್ದಾಗ ತಾನು ಯಾವ ಉಪಾಯದಿಂದ ಸೀರೆಗಳನ್ನು ಸಂಪಾದಿಸಿದ ವಿಷಯ ಹೇಳಿದ. ಸುಖಭೋಗದಲ್ಲಿ ಮದುವೆಯ ದಿವಸವನ್ನೇ ಆತ ಮರೆತಿದ್ದ. ಒಂದು ದಿನ ರಾಜಮ್ಮನೇ ‘ಮದುವೆ ಯಾವಾಗ ರಾಯರೇ?’ ಎಂದು ಕೇಳಿದಳು. ಅನಂತಯ್ಯನು ಸ್ವಲ್ಪ ಹೊತ್ತು ದಿನಗಳನ್ನು ಎಣಿಸಿ ಎಂದ.

‘ಇನ್ನೂ ಹತ್ತು ದಿನಗಳಿವೆ.’

‘ನಿಮ್ಮದು ಮತ್ತು ರಾಮರಾಯರೊಡನೆ ಒಂದು ಓಡಾಟ ಅಲ್ಲವೇ?’ ಎಂದು ತನ್ನ ಪ್ರಶ್ನೆಯನ್ನು ಮುಂದುವರಿಸಿದಳು. ಅನಂತಯ್ಯ ಈಗಾಗಲೇ ರಾಮಪ್ಪನ ವಿಚಾರವನ್ನು ಬಹಳವಾಗಿ ಹೇಳಿದ್ದ. ರಾಜಮ್ಮ [illegible]ದಿಂದ ಪಾರ್ವತಮ್ಮನವರ ಮನೆಯ ಆಡಳಿತವನ್ನೆಲ್ಲಾ ಅನಂತಯ್ಯನಿಂದ ಗ್ರಹಿಸಿ ಬಿಟ್ಟಿದ್ದಳು.

‘ಹೂ... ... ಅಲ್ಲವೇ .. ... ರಾಮಪ್ಪ ಅಲ್ಲದೆ ಇನ್ನಾರು ..... ... ನನ್ನ ಓಡಾಟ ಎಲ್ಲಾ ಮೇಲೆ ಮೇಲೆ ಅಷ್ಟೇ’ ಎಂದನು.

‘ಆದು ಸರಿ ರಾಯರೇ; ಆವತ್ತು ಹೇಳಿದಿರಿ ..........ನಿಮ್ಮ ರಾಯರಿಗೆ ಸಂಗೀತ ಎಂದರೆ ಇಷ್ಟ ಎಂದು. ಒಂದು ದಿನ ಚಂದ್ರಳ ಸಂಗೀತ ಕೇಳು ವುದಕ್ಕೆ ಕರೆದುಕೊಂಡು ಬರುತ್ತೇನೆ ಎಂದೂ ಹೇಳಿದ್ದಿರಿ. ಅದನ್ನು ಈಗ ಮರೆತ ಹಾಗೆ ಕಾಣುತ್ತದೆ.’

' ಅವನೆದುರು ಪ್ರಸ್ತಾಪ ಮಾಡಿಲ್ಲ. ಅದೂ ಅಲ್ಲದೆ ಆತ ಒಪ್ಪುತ್ತಾನೋ ಇಲ್ಲವೋ ಎಂದು ಯೋಚಿಸುತ್ತಿದ್ದೆ.'

' ಸರಿ–ಬಿಡಿ. ಎಷ್ಟು ಜನ ನಮ್ಮ ಚಂದ್ರಳು ಹಾಡುವುದನ್ನು ಕೇಳುವುದಕ್ಕೆ ಬರುವುದಿಲ್ಲ. ಮೊನ್ನೆ ಶನಿವಾರ ಎದುರುಸಾಲಿನ ಭೀಮಾಚಾರ್ಯರು ಕೂಡಾ ಬಂದು ತಲೆದೂಗಿ ಹೋಗಲಿಲ್ಲವೇ !'

' ನೀನು ಹೇಳೋದು ಸರಿ ......' ಎಂದು ಯೋಚಿಸುತ್ತಾ ನುಡಿದ ಅನಂತಯ್ಯ.

ದೂರ ಸರಿದಿದ್ದ ಚಂದ್ರ ಮತ್ತೆ ಅವನನ್ನು ಒರಗಿ ಕುಳಿತಳು. ಅನಂತಯ್ಯನು ಅವಳ ಮುಂಗುರುಳನ್ನು ತೀಡಿಸುತ್ತಾ ' ಚಂದ್ರಾ !' ಎಂದ. ಚಂದ್ರಳು ಒಂದೇ ಉಸುರಿಗೆ ಅವನ ಕಡೆ ತಿರುಗಿದಳು. ಅನಂತಯ್ಯ ತನ್ನ ಎರಡು ಕೈಗಳಿಂದಲೂ ಅವಳ ಮುಖವನ್ನು ಹತ್ತಿರಕ್ಕೆ ಸೆಳೆದು ತುಟಿಗಳನ್ನು ಅವಳ ಕೆಂದುಟಿಗಳ ಮೇಲೆ ಒತ್ತಿದನು.

ಅಷ್ಟು ಹೊತ್ತಿಗೆ ಹೊರಗೆ ಹೋಗಲು ಎದ್ದು ನಿಂತಿದ್ದ ರಾಜಮ್ಮ ' ಸಂಗೀತ ಕಛೇರಿ ಯಾವತ್ತು ಮನುವೇಲಿ !' ಎಂದು ಪ್ರಶ್ನಿಸಿದಳು.

ಅನಂತಯ್ಯ ಒಂದು ಕೈಯಿಂದ ಚಂದ್ರಳ ಕೆನ್ನೆಯನ್ನು ಸವರುತ್ತಾ ' ಹುಡುಗೀ ತಾಯಿಗೆ ಅವೆಲ್ಲಾ ಬೇಡವಾಗಿದೆ ' ಎಂದನು.

' ರಾಯರು ಸ್ವಲ್ಪ ಮುತುವರ್ಜಿ ತೆಗೆದುಕೊಂಡರೆ ನಮ್ಮ ಚಂದ್ರಳದೇ ಸಂಗೀತ ಇಡಿಸಬಹುದಲ್ಲ ' ಎಂದು ರಾಜಮ್ಮ ಹೊರಡಲನುವಾದಳು.

' ಆಗಲಿ ಆ ವಿಚಾರ ಬಿಡಿ. ನಾನು ನೋಡಿಕೊಳ್ಳುತ್ತೇನೆ ' ಎಂದ ಅನಂತಯ್ಯ.

‡ ‡ ‡ ‡

ರಾಮುವನ್ನೇನೋ ಸಂಗೀತ ಕಛೇರಿ ಇಡಿಸುವುದಕ್ಕೆ ಒತ್ತಾಯಪಡಿಸಲು ಬಹಳ ಕಾಲ ಹಿಡಿಯಲಿಲ್ಲ. ಆದರೆ ಪಾರ್ವತಮ್ಮನವರನ್ನು ಒಪ್ಪಿಸುವುದು ಸ್ವಲ್ಪ ಕಷ್ಟವಾಯಿತು. ಅವರಿಗೆ ಅದೊಂದೂ ಬೇಕಾಗಿರಲಿಲ್ಲ. ಸ್ವಲ್ಪದರಲ್ಲಿಯೇ ಮದುವೆಯ ಶಾಸ್ತ್ರವನ್ನು ಮುಗಿಸಬೇಕೆಂದಿದ್ದರು. ಆದರೆ

ಅನಂತಯ್ಯ ಮತ್ತು ರಾಮುವಿನ ಒತ್ತಾಯವು ಬಲವಾಗಲು ಒಪ್ಪಲೇ ಬೇಕಾಯಿತು.

ಮದುವೆಯ ಕೊನೆಯ ದಿನ ಚಂದ್ರಳ ಸಂಗೀತವು ಏರ್ಪಟ್ಟಿತ್ತು. ಹೊಸ ದಂಪತಿಗಳನ್ನು ಆಶೀರ್ವದಿಸಲು ಬಂದಿದ್ದವರೆಲ್ಲಾ, ಚಂದ್ರಳ ಇಂಪಾದ ಗಾನಕ್ಕೆ ಮನಸೋತರು. ಸುಶ್ರಾವ್ಯ ಗಾನವೊಂದೇ ಏನು. ಅವಳ ವೈಯ್ಯಾರಕ್ಕೂ ಮರುಳುಗೊಂಡರು. ರಾಮಪ್ಪನಂತೂ ಅವಳ ಸೌಂದರ್ಯ ವನ್ನು ಕಳ್ಳತನದಿಂದಲೇ ಅನುಭವಿಸುತ್ತಿದ್ದನು. ಮದುವೆಯ ಕಾರ್ಯದಲ್ಲಿ ಸ್ವಲ್ಪ ಓಡಾಡಬೇಕಾಗಿದ್ದುದರಿಂದ ಅವಳ ಸೌಂದರ್ಯ ಸಾಧನೆಗೆ ಅಡಚಣೆ ಯುಂಟಾಗುತ್ತಿತ್ತು. ಮೊದಲು, ಅನಂತಯ್ಯನು ತನಗೆ ಪರಿಚಯವಿರುವ ಒಬ್ಬ ಹೆಂಗಸರಿಂದ ಸಂಗೀತ ಏರ್ಪಡಿಸಬೇಕೆಂದಾಗ ರಾಮಪ್ಪನು ಹಿಂದು ಮುಂದೆ ನೋಡಿದ್ದ. ಆಗ ಅವರು ಒಳ್ಳೆಯ ಮನೆತನದವರೆಂದೂ, ಸಂಗೀತ ದಲ್ಲಿ ಬಹಳ ಶ್ರಮಪಟ್ಟಿರುವರೆಂದೂ ಅನಂತಯ್ಯ ಹೇಳಿದ್ದ. ಅವರ ಕುಲ ಗೋತ್ರಗಳನ್ನು ವಿಚಾರಿಸಲು 'ಪಾಪ ಅವರು ಕಷ್ಟದಲ್ಲಿದ್ದಾರೆ. ಆಗಾಗ ಯಾರಾದರೊಬ್ಬರು ದೊಡ್ಡ ಮನುಷ್ಯರ ಸೇವೆ ಅವರು ಮಾಡುತ್ತಾರೆ ಅಷ್ಟೇ' ಎಂದು ಹೇಳಿದ್ದ ಅನಂತಯ್ಯ.

ಚಂದ್ರ ಬಿನ್ನಾಣಗಿತ್ತಿಯಂತೆ ಕಣ್ಣುಗಳನ್ನು ನಲಿಸಿ ಹಾಡುತ್ತಿರುವಾಗ ಅನಂತಯ್ಯನು ರಾಮಪ್ಪನ ಹತ್ತಿರ ಬಂದು 'ನೋಡು ರಾಮು, ಹೇಗಿದೆ ಹಾಡುಗಾರಿಕೆ?' ಎಂದ. ರಾಮಪ್ಪನ ದೃಷ್ಟಿ ಅವಳ ಕಡೆಗೇ ಇತ್ತು. ಅನಂತಯ್ಯ ರಾಮಪ್ಪನ ಹತ್ತಿರ ಬರುತ್ತಲೂ ಚಂದ್ರ ರಾಮಪ್ಪನನ್ನು ನೋಡುತ್ತಾ 'ಮದನಮೋಹನ ಶ್ಯಾಮಸುಂದರ' ಹಾಡುವುದಕ್ಕೆ ಪ್ರಾರಂಭಿಸಿ ದಳು. ಅವಳ ನವಯೌವನ ವದನವು ರಾಮಪ್ಪನಲ್ಲಿ ಮನೋವಿಕಾರ ವನ್ನುಂಟುಮಾಡಿತು. ಮೈಯೆಲ್ಲಾ 'ಜುಂ' ಎಂದಹಾಗಾಯಿತು. ಯಾರೊ ಕೂಗಿದಂತಾಗಲು 'ಬಂದೇ' ಎನ್ನುತ್ತಾ ಅದನ್ನೇ ನೆಪವಾಗಿ ಮಾಡಿಕೊಂಡು ಚಂದ್ರಳ ಮೋಹನಾಸ್ತ್ರದಿಂದ ದೂರ ಸರಿದನು. ಬಂದಿದ್ದವರೆಲ್ಲಾ ಸಂಗೀತ ಬಹಳ ಸೊಗಸಾಗಿತ್ತೆಂದು ಹೇಳಿ ಹೊರಟರು. ಎಲ್ಲರ ಬಾಯಲ್ಲೂ ಅವಳ ಬಗ್ಗೆ ಮಾತುಗಳೇ.

ಚಂದ್ರ ಮನೆಗೆ ತೆರಳುವಾಗ ರಾಮುವಿನ ಕೈಯಿಂದಲೆ ತನ್ನ ಸೇವೆಯ ಪ್ರತಿಫಲ ಸ್ವೀಕರಿಸಿ, 'ರಾಯರ ವಿಶ್ವಾಸ ಸರ್ವದಾ ಇರಬೇಕು' ಎಂದಳು. ಅಲ್ಲಿಯೇ ನಿಂತಿದ್ದ ರಾಜಮ್ಮ ಯಾರಿಗೂ ಕಾಣದಂತೆ ಅನಂತಯ್ಯನನ್ನು ಮೆಲ್ಲಗೆ ತಿವಿದಳು. ಕೂಡಲೇ ಅವನು 'ಚಂದ್ರವ್ವಾ! ನೋಡಿ, ಈ ದಿನ ನಿಮ್ಮ ಹಾಡುಗಾರಿಕೆ ಬಹಳ ಚೆನ್ನಾಗಿತ್ತು. ಪುರಸತ್ತು ಮಾಡಿಕೊಂಡು ನಾನು ಮತ್ತು ರಾಯರು ನಿಮ್ಮ ಸಂಗೀತಶ್ರವಣಕ್ಕೆ ಒಂದು ದಿನ ಬರುತ್ತೇವೆ' ಎಂದ. 'ಅಗತ್ಯವಾಗಿ ಬರಬೇಕು' ಎಂದು ನುಡಿದಳು ಚಂದ್ರಾ ಹುಬ್ಬು ಹಾರಿಸಿ ಕಣ್ಣು ಮಿಟುಕಿಸಿ ಓರೆ ನೋಟ ಬೀರಿ. ರಾಮುಪ್ಪನ ಮೈಯೆಲ್ಲಾ ಅದುರುತ್ತಿತ್ತು. ಅವರು ಹೋದ ಕಡೆಯೇ ನೋಡುತ್ತಾ ನಿಂತನು.

ಮದುವೆಯ ಗಲಾಟೆಯೆಲ್ಲಾ ಕಳೆದ ನಂತರ ರಾಮುವೇ 'ಲೋ! ಅನಂತು, ಆ ದಿನ ಚಂದ್ರ ಎಷ್ಟು ಚೆನ್ನಾಗಿ ಹಾಡಿದಳು. ಇನ್ನೊಂದು ಸಲ ಅವಳ ಹಾಡನ್ನು ಕೇಳೋಣ ಅನ್ನಿಸುವುದು' ಎಂದ.

ಅನಂತುವಿಗೂ ಸಂತೋಷವಾಯಿತು. 'ಶುಕ್ರವಾರ ಅವಳ ಮನೆಯಲ್ಲಿ ಸಂಗೀತವಿದೆ. ಹೋಗಿ ಕೇಳೋಣ ಬಾ' ಎಂದ.

'ಅವಳ ಮನೆಯಲ್ಲಿ ಯಾರ್‍ಯಾರು ಇರುತ್ತಾರೋ?........ ...' ಎಂದು ಹಿಂದು ಮುಂದು ನೋಡಿದ. ಅನಂತಯ್ಯ 'ಅದಕ್ಕೆ ಯಾಕೆ ಇಷ್ಟು ಯೋಚನೆ? ರಾಯರಿಬ್ಬರಿಗೆ ಸಂಗೀತ ಹಾಡಬೇಕು ಎಂದು ಒಂದು ದಿನ ಗೊತ್ತುಮಾಡುತ್ತೇನೆ' ಎಂದು ಹೇಳಿ ಅಲ್ಲಿಂದ ಒಂದರೆಕ್ಷಣಕ್ಕೆ ಚಂದ್ರಳ ಮನೆಗೆ ಓಡಿದನು.

ಚಂದ್ರಳ ತಾಯಿ ರಾಜಮ್ಮನಿಗೆ ಪರಮಾನಂದವಾಯಿತು. ರಾಮುಪ್ಪನ ಸಂಬಂಧದಿಂದ ಬಹಳ ಹಣವನ್ನು ಕಸಿಯಬಹುದಾಗಿತ್ತು. ಎಂತಲೇ ಅನಂತಯ್ಯನಿಗೆ ವಂದನೆಗಳನ್ನಿತ್ತು 'ಎಷ್ಟಾದರೂ ನೀವು ನಮ್ಮ ಮನೆಯವರಲ್ಲವೇ?' ಎಂದು ಹೇಳಿ ಅವನನ್ನು ಗಗನಕ್ಕೇರಿಸಿದಳು.

ಮಾರನೆಯ ದಿನ ರಾತ್ರಿ ರಾಮುಪ್ಪ ಹಿಂದು ಮುಂದು ನೋಡುತ್ತಾ ಅನಂತಯ್ಯನೊಡನೆ ಚಂದ್ರಳ ಮನೆಯನ್ನು ಪ್ರವೇಶಿಸಿದನು. ರಾಜಮ್ಮ ಅವರಿಬ್ಬರನ್ನೂ ಉಪಚಾರದಿಂದ ಸ್ವಾಗತಿಸಿ ಚಿಕ್ಕ ಒಳಮನೆಗೆ ಕರೆದುಕೊಂಡು

ಹೋದಳು. ಅತಿಥಿಗಳಿಬ್ಬರೂ ದಿಂಬುಗಳನ್ನೊರಗಿ ಕೂತರು. ಕೂಡಲೇ ರಾಜಮ್ಮ 'ಚಂದ್ರಾ... ಬಾ' ಎಂದು ಮೆಲ್ಲನೆ ಕರೆದಳು. ಕೂಗಿದ ತಕ್ಷಣ ಪಕ್ಕದ ಬಾಗಿಲಿನಿಂದ ಮಧುರವಾಗಿ ಬಳೆಗಳ ನಿನಾದವನ್ನು ಮಾಡುತ್ತಾ ಚಂದ್ರ ಬಂದಳು. ಕೋಮಲವಾದ ಮಲ್ಲಿಗೆಗೆ, ಸುವಾಸನೆಯೂ ಸೇರಿ ಅದರ ಮನೋಹರತೆಯನ್ನು ಹೆಚ್ಚಿಸುವ ಹಾಗೆ ಚಂದ್ರಳೊಡಗೂಡಿದ್ದ ಸುಗಂಧವೂ ಅವಳ ಸೌಂದರ್ಯಕ್ಕೆ ಪುಟವನ್ನಿಟ್ಟಂತಿತ್ತು.

ಬಂದವಳೇ ರಾಮಪ್ಪನ ಹತ್ತಿರ ಕುಳಿತು ಹಾಡಲು ಪ್ರಾರಂಭಿಸಿದಳು.

ರಾಮುವಿಗೆ ಅಲ್ಲಿನ ವಾತಾವರಣವೇ ಮಂಕು ಬಡಿದಂತೆ ಮಾಡಿತು. ಮನಸ್ಸಿನ ಉಲ್ಲಾಸವನ್ನೆಬ್ಬಿಸುತ್ತಿದ್ದ ಪರಿಮಳವೂ ರಾಗಪೂರಿತವಾಗಿ ಶೃಂಗರಿಸಿದ್ದ ಆ ಕೋಣೆಯೂ ಅವನ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟುಮಾಡಿತು.

ಹಾಡುತ್ತಾ ಕುಳಿತಿದ್ದ ಚಂದ್ರಳ ದೇಹದ ಮಾಟವನ್ನು ನೋಡುತ್ತಾ ನೋಡುತ್ತಾ ತನ್ನನ್ನೇ ಮರೆತನು. ಅವಳ ದೇಹದ ನಿಲುವು ಮಿಕ್ಕೆಲ್ಲಾ ಅವಯವಗಳ ಕಾಂತಿಗಿಂತಲೂ ಮಿಗಿಲಾಗಿತ್ತು. ಚೆನ್ನಾಗಿ ಬಾಚಿ ಎತ್ತಿ ಕಟ್ಟಿದ್ದ ತುರುಬೂ, ಜೊತೆಗೆ ತುರುಬನ್ನು ಶೃಂಗರಿಸುತ್ತಿದ್ದ ಸುಗಂಧರಾಜನ ಅರ್ಧ ಚಂದ್ರಾಕೃತಿಯೂ, ಲಂಪಟತನವನ್ನು ತೋರುತ್ತಿದ್ದ ಆ ಕಣ್ಣುಗಳೂ ತಿದ್ದಿದ ಹುಬ್ಬುಗಳ ಮಧ್ಯೆ ಇದ್ದ ಚಿಕ್ಕ ಚಿಕ್ಕೆಯ ಕೆಂಪೂ, ವಿಷಯಾಸಕ್ತಿಯನ್ನೇಳಿಸುವ ಹಾಗೆ ಮಾಡುತ್ತಿದ್ದ ಆ ಎಳಸಿನಂತಿದ್ದ ಅವಳ ತುಟಿಗಳೂ ಅವನನ್ನು ಹುಚ್ಚುಹಿಡಿಸಿದವು.

ವೀಣೆಯನ್ನು ನುಡಿಸುತ್ತಿದ್ದ ಹಾಗೆಯೇ ಅವಳ ಸೆರಗು ಸ್ವಲ್ಪ ಜಾರಿತು. ರಾಮಪ್ಪನು ಸ್ವಲ್ಪ ಅಧೈರ್ಯ ಮತ್ತು ಆಸೆಯಿಂದ ಅವಳನ್ನೇ ನೋಡುತ್ತಾ ಕುಳಿತನು. ಅವನ ಕಣ್ಣುಗಳು ಅವಳ ಹೊಂಬಣ್ಣದ ದೇಹವನ್ನು ಅರಸುವುದಕ್ಕೆ ತೊಡಗಿದವು. ಅವಳು ತೊಟ್ಟಿದ್ದ ತೆಳ್ಳನೆಯ ರೇಷ್ಮೆಯ ವಸ್ತ್ರಗಳು ರಾಮಪ್ಪನಿಗೆ ಅವಳ ಉಬ್ಬಿದ ಅವಯವಗಳ ಆಕೃತಿಯನ್ನು ಅಪಹರಿಸಲು ಭಂಗತರಲಿಲ್ಲ. ಸಂಗೀತ ಮುಗಿಯುವುದಕ್ಕೆ ರಾತ್ರಿ ೧೨ ಗಂಟೆಯಾಗುತ್ತಾ ಬಂದಿತು. ಅನಂತಯ್ಯನು ಆಗ ಚಂದ್ರಳಿಗೆ 'ಮದನಮೋಹನ ಶ್ಯಾಮ

ಸುಂದರ'ವನ್ನು ಹಾಡಬೇಕೆಂದೂ ಅದು ರಾಯರಿಗೆ ಬಹಳ ಇಷ್ಟವೆಂದೂ ಹೇಳಿದನು.

ಚಂದ್ರ ಆ ಹಾಡನ್ನು ಹಾಡುವಾಗ ಅದರ ಜೊತೆ ತನ್ನ ಬೆಡಗನ್ನೆಲ್ಲಾ ಪ್ರದರ್ಶಿಸಿ ರಾಮಪ್ಪನನ್ನು ಉದ್ರೇಕಿಸಿದಳು. ರಾಮಪ್ಪನ ಪ್ರತಿಯೊಂದು ನಾಡಿಯಲ್ಲೂ ರಕ್ತವೆದ್ದು ನಿಂತಿತು. ಆ ಹಾಡು ಮುಗಿದ ಕೂಡಲೇ ರಾಜಮ್ಮ ರಾಮಪ್ಪನನ್ನು ತಮ್ಮ ಮನೆಯಲ್ಲಿಯೇ ಮಲಗಬೇಕೆಂದು ಪ್ರಾರ್ಥಿಸಿದಳು. ಏನು ಉತ್ತರ ಹೇಳಲೂ ತೋಚದೆ ರಾಮಪ್ಪ ಕಣ್ಣು ಕಣ್ಣು ಬಿಡುತ್ತಿರುವಾಗ ಅನಂತಯ್ಯ 'ಹೂ! ರಾಯರು ಇಲ್ಲೇ ಮಲಗುತ್ತಾರೆ' ಎಂದು ಹೇಳಿದ. ಹೀಗೆ ಉಪಾಯದಲ್ಲಿ ಚಂದ್ರ ರಾಮಪ್ಪರನ್ನು ಆ ರೂಮಿನಲ್ಲಿ ಬಿಟ್ಟು ರಾಜಮ್ಮ ಅನಂತಯ್ಯ ಹೊರಗೆ ಬಂದರು.

## ನಾಲ್ಕು

ಮದುವೆಯ ಶಿಷ್ಟಾಚಾರವನ್ನೆಲ್ಲಾ ನೋಡಲಾಗಿ ಸಾವಿರದ ತನಕ ಸಾಲವೇರಿ ಹೋಗಿತ್ತು. ಬೇಕಾಗಿದ್ದ ಸಾಲವನ್ನು ಪಕ್ಕದ ಮನೆ ರಂಗೈಯ್ಯ ಶೆಟ್ಟರಿಂದ ಬೇಗನೆ ಕೊಡುವುದಾಗಿ ಹೇಳಿ ತರಲಾಗಿತ್ತು.

'ರಂಗೈಯ ಶೆಟ್ಟರು ನಿನ್ನೆಯ ದಿನ ಬಂದು ಸಾಲದ ವಿಷಯ ಜ್ಞಾಪಿಸಿ ಹೋದರು, ಚಿಕ್ಕಮ್ಮಾ' ಎಂದು ರಾಮಪ್ಪ ಪಾರ್ವತಮ್ಮನವರಿಗೆ ಹೇಳಿದನು. ಅವರು 'ಪಾಪ! ............ ....ಯಾವುದೋ ಲೇವಾದೇವಿ ದುಡ್ಡು ಹತ್ತಿರ ಇಟ್ಟುಕೊಂಡಿದ್ದರು. ನಾವು ಬೇಗ ಹಣ ಕೊಡುತ್ತೇವೆಂದು ಹೇಳಿದ್ದಕ್ಕೋಸ್ಕರ ನಮ್ಮ ನಂಬಿಕೆ ಮೇಲೆ ಸಾಲ ಕೊಟ್ಟರು. ರಾಮು, ಹೇಗಾದರೂ ಮಾಡಿ ಅವರ ಸಾಲ ಮುಂಚೆ ತೀರಿಸಬೇಕು' ಎಂದರು.

'ಏನು ಮಾಡುವುದೋ ನನಗೆ ತೋಚದ ಹಾಗೆ ಆಗಿದೆ. ಖರ್ಚು ಎಷ್ಟು ಹಿಡಿದು ಮಾಡಿದರೂ ಸಾಲ ಮಾಡಲೇಬೇಕಾಯಿತು, ಚಿಕ್ಕಮ್ಮಾ.'

'ಇದಕ್ಯಾಕೆ ಅಷ್ಟು ಯೋಚನೆ. ಮಿಲ್ಲಿನ ಮೇಲೆ ಸಾಲ ತೆಗೆದು ರಂಗೈಯ ಶೆಟ್ಟರ ಸಾಲ ಮುಂಚೆ ತೀರಿಸಿದರಾಯಿತು. ಅನಂತರ ಮಿಲ್ಲಿನ ಸಾಲವನ್ನು ನಿಧಾನವಾಗಿ ಬಗೆಹರಿಸಬಹುದು' ಎಂದು ಅನಂತಯ್ಯ ಸಲಹೆ ಕೊಟ್ಟನು.

'ಎಲ್ಲಾದರೂ ಉಂಟೇನೋ? ಅನಂತೂ ......ಅವರಿದ್ದಾಗ ಮಿಲ್ಲು ಎಂದರೆ ಪ್ರಾಣವನ್ನಾಗಿ ಕಾಣುತ್ತಿದ್ದರು. ಈಗ ಅದರ ಮೇಲೆ ಸಾಲ ಮಾಡುವುದೇ ?'

'ರಂಗಯ್ಯಶೆಟ್ಟರ ಸಾಲ ಬಗೆಹರಿಸಲು ಮಿಲ್ಲಿನ ಮೇಲೆ ಸಾಲ ಮಾಡದೆ ಬೇರೆ ಮಾರ್ಗವೇ ಇಲ್ಲ ಚಿಕ್ಕಮ್ಮಾ. ಮಾಡಿದರೂ ತಾನೇ ಒಂದು ವರ್ಷದಲ್ಲಿ ಸಾಲ ತೀರಿಸಬಹುದು' ಎಂದ ರಾಮುಪ್ಪ.

ಪಾರ್ವತಮ್ಮನವರಿಗೆ ಸ್ವಲ್ಪ ಹೆದರಿಕೆಯುಂಟಾಯಿತು. 'ಏನೋಪ್ಪ ರಾಮು! ನಮ್ಮ ಮಿಲ್ಲಿನ ಹತ್ತಿರಲೇ ಬೇರೊಂದು ಮಿಲ್ಲು ಪ್ರಾರಂಭವಾಗಿದೆ ಎನ್ನುತ್ತೀಯಾ. ಮುಂಚಿನ ಹಾಗೆ ವರಮಾನ ಬರಲು ಹೇಗೆ ಸಾಧ್ಯ? ಎಲ್ಲಾ ನಮ್ಮದೇ ತಪ್ಪು. ಮದುವೆಯಲ್ಲಿ ಇಂಥ ಖರ್ಚ ಹೇಗೋ ಜಾಸ್ತಿಯಾಯಿತು. ಅದನ್ನು ಯೋಚಿಸಿ ಈಗ ಏನು ಪ್ರಯೋಜನ? ಎಲ್ಲಾನೂ ನಿನಗೆ ಬಿಟ್ಟಿದ್ದೇನೆ. ಯೋಚನೆ ಮಾಡಿ ಒಳ್ಳೆಯದೆಂದು ತೋರಿದ ರೀತಿಯಲ್ಲಿ ನಡೆದುಬಿಡು' ಎಂದು ಉತ್ತರವಿತ್ತರು.

ಮಾರನೇ ದಿನ ಅನಂತಯ್ಯ ಮತ್ತು ಶಾಂತಮ್ಮ ಮಿಲ್ಲನ್ನು ತನ್ನ ಹೆಸರಿಗೆ ಮಾಡಿಕೊಡುವ ಹಾಗೆ ಕೇಳಲು ಒಳ್ಳೆಯ ಸಮಯವೆಂದು ರಾಮುವಿಗೆ ತಿಳಿಸಿದರು. ಅದರಂತೆಯೇ ಪಾರ್ವತಮ್ಮನವರನ್ನು ಕರೆದು 'ಅಲ್ಲಾ ಚಿಕ್ಕಮ್ಮಾ, ಮಿಲ್ಲು ನಿನ್ನ ಹೆಸರಿನಲ್ಲಿರುವುದರಿಂದ ನಿನಗೆ ಬಹಳ ತೊಂದರೆಯಾಗುತ್ತಿಲ್ಲವೇ ? ನೋಡು! ಮಿಲ್ಲಿನ ಮೇಲೆ ಸಾಲ ಮಾಡಬೇಕಾಗಿ ಬಂದಿರುವುದರಿಂದ ಪ್ರತಿಯೊಂದು ಕಾಗದಕ್ಕೂ ಪತ್ರಕ್ಕೂ ನಿನ್ನಿಂದ ಸಹಿ ಆಗಬೇಕಾಗುತ್ತೆ. ಅದೂ ಅಲ್ಲದೆ ಮಿಲ್ಲಿನ ವಿಚಾರ ಇನ್ನೂ ಕೋರ್ಟಿನಲ್ಲಿರುವುದರಿಂದ, ನೀನೂ ಕೋರ್ಟಿಗೆ ಬರಬೇಕಾಗುವುದೇನೋ ?' ಎಂದನು.

ಪಾರ್ವತಮ್ಮನವರಿಗೆ ಅವನ ಪ್ರಶ್ನೆಯಲ್ಲಿದ್ದ ಕಪಟ ಗೊತ್ತಾಗಲಿಲ್ಲ. 'ರಾಮು, ಏನೋ ಕಷ್ಟಾಪ್ಪ. ಅನುಭವಿಸಬೇಕು. ನೀನು ಧೈರ್ಯ ತೆಗೆದುಕೊಂಡು ನನ್ನ ಕಷ್ಟದಲ್ಲಿ ಕನಿಕರವಿಟ್ಟು ದುಡಿಯುತ್ತಿದ್ದೀಯಾ. ಆ ಮಹಾರಾಯರು ಇದ್ದಿದ್ದರೆ.......' ಎಂದು ಸೆರಗಿನಿಂದ ತಮ್ಮ ಕಣ್ಣೀರನ್ನು ಒರಸಿಕೊಂಡರು. ಏನೋ ಪ್ರಶ್ನೆ ಕೇಳಿದರೆ, ಎಲ್ಲಿಗೋ ಹೋಯಿತಲ್ಲಾ ಎಂದು ರಾಮು ಯೋಚಿಸಿದ.

‘ ಅಯ್ಯೋ ! ಚಿಕ್ಕಮ್ಮಾ ಆ ಮಾತೇಕೆ ಈಗ ? ನಾನು ಕೇಳಿದ್ದು ನಿನಗೆ ತೊಂದರೆ ಅಲ್ಲವೆ ಅಂತ ?’ ಎಂದನು.

‘ ಅದೇನು ತೊಂದರೆ ರಾಮು, ದೊಡ್ಡ ಜವಾಬ್ದಾರಿಯನ್ನೆಲ್ಲ ಪಾಪ ಹುಡುಗ ನೀನು ಹೊತ್ತಿರುವಾಗ ನಾನು ಅಷ್ಟನ್ನೂ ಮಾಡದಿದ್ದರೆ ?’

ರಾಮು ಮೆಲ್ಲನೆ ಅನಂತಯ್ಯನ ಕಡೆ ನೋಡಿದನು. ಅನಂತಯ್ಯನು ಆಗ ‘ ಪಾತೀ ! ಮಿಲ್ಲನ್ನು ರಾಮುವಿನ ಹೆಸರಿಗೆ ಮಾಡಿಬಿಡೇ ’ ಎಂದನು. ಶಾಂತಯ್ಯನು ‘ ಅದು ಬಹಳ ಒಳ್ಳೆಯದು ’ ಎಂದು ಮಾತು ಸೇರಿಸಿದನು. ಪಾರ್ವತಮ್ಮನವರಿಗೆ ಇಷ್ಟಾದರೂ ಅವರ ಒಳಸಂಚು ತಿಳಿಯಲಿಲ್ಲ. ರಾಮಪ್ಪ ತಮ್ಮ ಸ್ವಂತ ಮಗನೆಂದು ತಿಳಿದಿದ್ದರಿಂದ ಅವನು ಮೋಸ ಮಾಡುತ್ತಾನೆಂಬ ಸಂದೇಹವಿರಲಿಲ್ಲ. ಅವರು ಅನಂತಯ್ಯನೂ, ಶಾಂತಯ್ಯನೂ ಹುಚ್ಚು ಮಾತು ಹೇಳುತ್ತಿರುವರೆಂದು ತಿಳಿದು, ‘ ಶಾಂತಯ್ಯಾ ! ರಾಮೂ ವಿಚಾರ ನಿಮಗಿನ್ನೂ ಗೊತ್ತಿಲ್ಲ. ಮಿಲ್ಲು ನನ್ನ ಹೆಸರಿನಲ್ಲಿದ್ದರೇನು ? ರಾಮು ಹೆಸರಿನಲ್ಲಿದ್ದರೇನು ? ಎಲ್ಲಾ ಒಂದೇ. ಅವನೇನೂ ನಮ್ಮ ಕೈಯನ್ನು ಬಿಡುವುದಿಲ್ಲ. ರಾಮು ಒಬ್ಬನೇ ನಮ್ಮ ಗಂಡುಮಗ ; ರಾಮುವಿನಿಂದಲೇ ನಮ್ಮ ಮನೆ ಮುಂದೆ ಬರಬೇಕು ಎಂದು ಅವರಿದ್ದಾಗ ಹೇಳುತ್ತಿದ್ದರು. ಅವನು ಇಷ್ಟು ಚೆನ್ನಾಗಿ ಸಂಸಾರ ನಿರ್ವಹಣ ಮಾಡುವುದನ್ನು ಅವರು ಕಂಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು !’ ಎಂದು ತಮ್ಮ ಕಣ್ಣೀರಿನ ತೇವವನ್ನು ಒರಸಿಕೊಂಡರು. ರಾಮು, ಅನಂತಯ್ಯ, ಶಾಂತಯ್ಯ ಇವರುಗಳು ಸಮಯ ಸರಿಯಲ್ಲವೆಂದು ಎದ್ದು ಹೋದರು.

ಚಂದ್ರಳ ಸಂಪರ್ಕವಾದಂದಿನಿಂದ ರಾಮಪ್ಪ ರಾತ್ರಿಯ ಹೊತ್ತು ಮನೆಗೆ ಬರುವುದು ಕ್ರಮತಪ್ಪಿತು. ಸಂಶಯ ಬರದಿರಲೆಂದು, ಮಿಲ್ಲಿನ ಕೆಲಸ ಬಹಳವಿರುವುದೆಂದೂ, ಅದರಿಂದ ರಾತ್ರಿ ಬರುವುದು ಹೊತ್ತಾಗುವುದೆಂದೂ ಸುಶೀಲಳಿಗೆ ಹೇಳುತ್ತಿದ್ದನು.

ಮಿಲ್ಲನ್ನು ತನ್ನ ಹೆಸರಿಗೆ ಬರೆದುಕೊಡುವಂತೆ ಪುನಃ ಪಾರ್ವತಮ್ಮನವರನ್ನು ಕೇಳಲು ಹೆದರಿದನು. ಅವರ ಸೌಜನ್ಯ, ವಿನಯ ಮೇಲಾಗಿ ಎಲ್ಲರೆದುರಿಗೂ, ರಾಮಪ್ಪನನ್ನು ಹೊಗಳುತ್ತಿದ್ದುದೂ, ಅವನ ಮನಸ್ಸನ್ನು ಅಳುಕಿಸುತ್ತಿತ್ತು. ಮೊದಲಿನಿಂದಲೂ ಸಿರಿತನದ ಗರ್ವಕ್ಕೆ ಮನಸೋಲದೆ ಇದ್ದ

ಪಾರ್ವತಮ್ಮ ಸಾತ್ವಿಕ ಕಳೆಯಿಂದ ಶೋಭಿಸುತ್ತಿದ್ದರು. ಅವರ ವಿನಯ ಶೀಲತೆ ಯಾರನ್ನಾದರೂ ಅವರಲ್ಲಿ ಗೌರವವನ್ನಿಡುವ ಹಾಗೆ ಮಾಡುತ್ತಿತ್ತು. ಅಂತೆಯೇ ಮಿಲ್ಲಿನ ಕೆಲಸಗಾರರೆಲ್ಲರೂ ಒಮ್ಮತದಿಂದ ಪಾರ್ವತಮ್ಮನವರ ಗುಣಗಳಿಗೆ ಮಣಿಯುತ್ತಿದ್ದರು.

ಮಿಲ್ಲನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆಯು ರಾಮುವಿಗೆ ದಿನೇದಿನೇ ಹೆಚ್ಚಾಯಿತು. ಆದುದರಿಂದ ಬೇರೆ ವಿಧಾನಗಳಿಗೆ ಮನಸ್ಸನ್ನು ತಿರುಗಿಸಿದನು. ಆ ಪ್ರಸ್ತಾಪವಾದ ಕೆಲವು ದಿನಗಳ ಮೇಲೆ ಸುಶೀಲಳನ್ನು ಕುರಿತು 'ಸುಶೀಲಾ, ನಿಮ್ಮತ್ತೇದು ಎಷ್ಟು ಜೋರೆ! ......ನಾವಿಲ್ಲದ್ದರೆ ತಾನೇ ಇವರ ಜೋರು. ಬೇರೆ ಹೋದರೆ ನಮ್ಮನ್ಯಾರು ಕೇಳೋರು?' ಎಂದನು.

ಸುಶೀಲಳಿಗೂ ಪಾರ್ವತಮ್ಮನವರಿಗೂ ಮೊದಲಿನಿಂದಲೂ ಅನ್ಯೋನ್ಯತೆ ಬಹಳ. ಸುಶೀಲ, ಪಾರ್ವತಮ್ಮನವರಲ್ಲಿ ಬಹಳ ವಿಶ್ವಾಸ ಮರ್ಯಾದೆ ಗಳನ್ನಿಟ್ಟಿದ್ದಳು. ಬೇರೆ ಸಂಸಾರ ಹೂಡುವುದಾಗಿ ರಾಮು ಆಗಾಗ ಗೊಣ ಗುಟ್ಟುತ್ತಲಿದ್ದ. ತನ್ನತ್ತೆಯನ್ನು ಬಿಟ್ಟು ದೂರ ಹೋಗಲು ಅವಳಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. 'ನಮ್ಮತ್ತೆಯರೊಬ್ಬರನ್ನೇ ಬಿಟ್ಟು ನಾನು ಬರುವು ದಿಲ್ಲ. ನೀವೇ ಬೇರೆ ಹೋಗಿ' ಎಂದಳು ಸುಶೀಲ.

ರಾಮುವಿಗೆ ಕೋಪವು ಏರಿಬಂದಿತು. 'ನೀನು ಬರದಿದ್ದರೆ ಬಿಡು. ನಾನೊಬ್ಬನೇ ಹೊರಡುತ್ತೇನೆ. ಅತ್ತೆ ಸೊಸೆ ಊಟಕ್ಕೆ ಕಡಿಯುವುದನ್ನು ನೋಡುತ್ತೇನೆ' ಎಂದನು.

'ಮಿಲ್ಲಿನ ವರಮಾನ ಇಲ್ಲವೇನೋ?' ಎಂದು ಸ್ವಲ್ಪ ಹಾಸ್ಯದಿಂದ ಉತ್ತರವಿತ್ತಳು.

'ಹೌದೌದು. ನಾಸಿರೋ ಹೊತ್ತಿಗೆ ತಾನೇ ಮಿಲ್ಲು. ಇಷ್ಟೆಲ್ಲಾ ಮಾಡಿದರೂ, ಮಿಲ್ಲೊಂದನ್ನು ನನ್ನ ಹೆಸರಿಗೆ ಮಾಡೋದಕ್ಕೇನಂತೆ? ಇರಲಿ. ನೀವೇ ನಾನು ಹೋದ ಮೇಲೆ ಜೀವನ ನಡೆಸಿಕೊಂಡಿರಿ....... ನೋಡ್ತೀನಿ.'

'ಏನಾದರೂ ಮಾಡಿ; ನಮ್ಮತ್ತೇನ ನಾನು ಬಿಟ್ಟು ಬರೋಲ್ಲ.'

ರಾಮು ತನ್ನ ಕೈಯಲ್ಲಿದ್ದ ಬಟ್ಟಲನ್ನು ಅಲ್ಲಿಯೇ ಕುಕ್ಕಿ 'ಈ ಮನೇಲಿರೋಷ್ಟಕ್ಕೆ ತಾನೇ ನಿನ್ನ ಕೆಡಿಸಿ ಕೊಬ್ಬಿಸಿರುವುದು. ನಿನ್ನ ಹೀಗೆ ಬಿಟ್ಟರೆ ಮುಂದೆ ಬಹಳ ಕಷ್ಟ' ಎಂದು ಕೂಡಲೇ ಅಲ್ಲಿಂದ ಎದ್ದು ಬಾಗಿಲನ್ನು ಕೊಪ್ಪನೆ ಹಾಕಿಕೊಂಡು ಚಂದ್ರಳ ಮನೆಗೆ ತೆರಳಿದನು.

ಸುಶೀಲಳ ಕಣ್ಣುಗಳಲ್ಲಿ ನೀರು ಉಕ್ಕಿ ಬಂತು. ಬಿಕ್ಕಿ ಬಿಕ್ಕಿ ಅಳುವುದಕ್ಕೆ ಮೊದಲುಮಾಡಿದಳು. ಒಬ್ಬಳೆ........ಅದೂ ಅಲ್ಲದೆ ಬಸುರಿ; ರೂಮಿನಲ್ಲಿರುವುದಕ್ಕೆ ಹೆದರಿಕೊಂಡಳು. ಜೊತೆಗೆ ಏನೋ ನೆನಸಿಕೊಂಡು 'ಅತ್ತೇ! ಅತ್ತೇ!' ಎನ್ನುತ್ತಾ ಪಾರ್ವತಮ್ಮನವರ ಬಳಿ ಬಂದು ಅವರ ಕಾಲುಗಳನ್ನು ಬಿಗಿಯಾಗಿ ಹಿಡಿದುಕೊಂಡು 'ನಿಮ್ಮನ್ನು ನಾನು ಬಿಟ್ಟು ಹೋಗೋಲ್ಲಾ' ಎಂದು ಹೇಳುತ್ತಾ ಕಂಬನಿಗರೆದಳು. ಸುಶೀಲ ಹೆದರಿಕೊಂಡಿರಬಹುದೆಂದು ತಿಳಿದು 'ಯಾಕೆ ಹೆದರಿಕೊಂಡೆಯಮ್ಮಾ? ನಾನು ಇಲ್ಲೇ ಇದ್ದೇನಲ್ಲಮ್ಮಾ... ತಾಯಿ' ಎಂದು ಅವಳ ಕೂದಲನ್ನು ಸವರುತ್ತಾ ವಿಚಾರಿಸಿದರು ಪಾರ್ವತಮ್ಮ. ಸ್ವಲ್ಪ ಹೊತ್ತು ಇವರು ಸಮಾಧಾನ ಮಾಡಿದ ಮೇಲೆ 'ಮೂರುದಿನಸದಿಂದ ಅವರು 'ಬೇರೆ ಹೋಗೋಣ' ಎಂತ ಒತ್ತಾಯಪಡಿಸುತ್ತಿದ್ದಾರೆ ಅತ್ತೇ.... ನಿಮ್ಮನ್ನು ನಾನು ಖಂಡಿತವಾಗಿಯೂ ಬಿಟ್ಟು ಹೋಗೊಲ್ಲ....' ಎಂದಳು.

'ಯಾಕಮ್ಮಾ; ನಾನೇನಾದರೂ ಹೆಚ್ಚು ಮಾತನಾಡಿದೆನೇನಮ್ಮಾ? ಒಂದುವೇಳೆ ಏನಾದರೂ ನುಡಿದಿದ್ದರೂ ಕ್ಷಮಿಸು ಎಂದು ಕೇಳಿಕೊಳ್ಳುತ್ತೇನೆ. ಸದ್ಯ ನಾವೆಲ್ಲ ಒಟ್ಟಿಗೆ ಇದ್ದರೆ ನನ್ನ ಪುಣ್ಯ ಎಂದು ತಿಳಿಯುತ್ತೇನೆ' ಎಂದರು.

ಆದರೂ, ತನ್ನ ಗಂಡನು ರಾತ್ರಿಯಲ್ಲಿ ಹೊತ್ತಾಗಿ ಮನೆಗೆ ಬರುತ್ತಿದ್ದ ವಿಷಯದಲ್ಲಿ ಬಂದ ಸಂಶಯ ಸೂಚನೆಯನ್ನು ಮಾತ್ರ ಪಾರ್ವತಮ್ಮನವರಿಗೆ ಸುಶೀಲ ತಿಳಿಸಲಿಲ್ಲ. ಬದಲು ಮಿಲ್ಲು ತನ್ನ ಹೆಸರಲ್ಲಿಲ್ಲವೆಂದು ರಾಮು ಕೂಗಾಡಿದ ಸಂಗತಿಯನ್ನು ಕೂಲಂಕಷವಾಗಿ ತಿಳಿಸಿದಳು.

ಪಾರ್ವತಮ್ಮನವರು ಸ್ವಲ್ಪ ಯೋಚಿಸಿ 'ಸುಶೀಲಾ, ಅವನದು ಇನ್ನೂ ಚಿಕ್ಕ ವಯಸ್ಸು........ಏನೋ ಕೋಪದಲ್ಲಿ ಹಾಗೆ ಆಡಿರಬಹುದು. ಒಂದುವೇಳೆ ಮಿಲ್ಲನ್ನು ತನ್ನ ಹೆಸರಿಗೆ ಆಗಬೇಕೆಂದು ಅಭಿಲಾಷೆಪಟ್ಟರೆ ಹಾಗೆಯೇ ಆಗಲಿ.......ಮೊನ್ನೆ ಈ ವಿಚಾರ ರಾಮೂನೇ ಆಡಿದ. ಆದರೆ ನನಗೆ ಈ

ವಿದ್ಯಮಾನಗಳು ಒಂದೂ ಗೊತ್ತಿರಲಿಲ್ಲ. ಪಾಪ. ನಿನ್ನನ್ಯಾಕೆ ಮನೆ ಬಿಟ್ಟು ಹೋಗೋಣ ಎಂದು ಗದರಿಸಬೇಕು' ಎಂದು ಸುಶೀಲಳನ್ನು ಸಮಾಧಾನ ಗೊಳಿಸಿದರು.

ಅಂದು ರಾತ್ರಿ ಚಂದ್ರಳ ಮನೆಯಲ್ಲಿಯೇ ರಾಮಪ್ಪ ಕಾಲ ಕಳೆದ. ಈಚೀಚೆಗಂತೂ ಅವನ ವೆಚ್ಚದ ರೀತಿಯು ಏರುತ್ತಾ ಬಂದಿತು. ರೂಢಿಯಂತೆ ಮಿಲ್ಲಿನ ಖರ್ಚು ಆದಾಯಗಳನ್ನು ಪಾರ್ವತಮ್ಮನವರಿಗೆ ತಿಳಿಸುತ್ತಿದ್ದ. ಪಕ್ಕದಲ್ಲೇ ಬೇರೊಂದು ಮಿಲ್ಲು ಕೆಲಸಕ್ಕೆ ಪ್ರಾರಂಭಿಸಿರುವುದರಿಂದಲೂ ಮಿಲ್ಲಿನ ಆಡಳಿತದಲ್ಲಿ ಶಾಂತಯ್ಯನು ಕೈಚಳಕವನ್ನು ತೋರಿಸುತ್ತಿದ್ದುದರಿಂದಲೂ ಮಿಲ್ಲಿನ ವರಮಾನ ಕಡಿಮೆಯಾಗುತ್ತಿತ್ತು. ಸುಳ್ಳು ಲೆಖ್ಖವನ್ನು ಪಾರ್ವತಮ್ಮನವರಿಗೆ ಹೇಳುವುದೂ ಕಷ್ಟವಾಗುತ್ತಿತ್ತು. ಚಂದ್ರಳ ಮನೆ ಸಂಸಾರವೂ ಇವನ ದುಡ್ಡಿನಿಂದಲೇ ನಡೆಯಬೇಕು. ಆದುದರಿಂದ ರಾಮಪ್ಪನಿಗೆ ಏನು ಮಾಡಲು ತೋರಲಿಲ್ಲ. 'ಏನು ಎಲ್ಲಕ್ಕೂ ಈ ಹೆಂಗಸನ್ನು ಕೇಳಬೇಕು ....... ಒಂದು ರೂಪಾಯಿನ ಲೆಖ್ಖಕ್ಕೂ ಇವಳ ಹಂಗು. ಮಿಲ್ಲನ್ನು ನಡೆಸುವವನು ನಾನೇ ಆಗಿರುವಾಗ ಇವಳನ್ಯಾಕೆ ನಾನು ಕೇಳಬೇಕೊ' ಎಂದು ಸಂಕಲ್ಪಿಸಿ ಮಿಲ್ಲಿನ ಆದಾಯ ಖರ್ಚಿನ ವಿಷಯವನ್ನು ಪಾರ್ವತಮ್ಮನವರಿಗೆ ತಿಳಿಸುವುದನ್ನೇ ಬಿಟ್ಟುಬಿಟ್ಟನು. ಪಾರ್ವತಮ್ಮನವರಾದರೋ, ತಮಗೂ ಆ ವಿಷಯಕ್ಕೂ ಸಂಬಂಧವಿಲ್ಲದವರಂತೆಯೇ ಇದ್ದರು. ಇದರಿಂದ ತಾನಾಗಿಯೇ ಜಗಳವೇಳಬಹುದೆಂದು ತಿಳಿದಿದ್ದ ರಾಮಪ್ಪನಿಗೆ ನಿರಾಶೆಯಾಯಿತು.

ಆದರೆ ಈ ಎಲ್ಲದರಿಂದ ಮನೆಯಲ್ಲಿ ಮಾತ್ರ ಸುಗಮವಾಗಿ ಸಂಸಾರ ನಡೆಯಲು ಅಡಚಣೆಗಳುಂಟಾಗುತ್ತಿದ್ದವು.

‡ ‡ ‡ ‡

ಸೀತಾಲಕ್ಷ್ಮಿಯ ಮಾವಂದಿರಿಗೆ ಮೈಸೂರಿಗೆ ವರ್ಗವಾಗಿತ್ತು. ಬಿ. ಎ ತರಗತಿಯು ಮೈಸೂರಿನಲ್ಲಿದ್ದುದರಿಂದ ಅಣ್ಣನ ಮನೆಯಲ್ಲಿಯೇ ಇದ್ದು ವ್ಯಾಸಂಗ ನಡೆಸಲು ಅನುಕೂಲವಾಯಿತು. ಯಥಾಪ್ರಕಾರ ರಾಜಶೇಖರನ ಫೀಸನ್ನು ಕಳುಹಿಸಬೇಕೆಂದು ರಾಮಪ್ಪನ ಹೆಸರಿಗೆ ನಂಜಪ್ಪನವರು ಕಾಗದ

ಬರೆದರು. ಅದು ಯಾರಿಂದ, ಯಾತಕ್ಕಾಗಿ ಬಂದಿದೆಯೆಂಬುದನ್ನು ತಿಳಿಯಲು ಪಾರ್ವತಮ್ಮನವರಿಗೆ ಹೆಚ್ಚು ಹೊತ್ತು ಹಿಡಿಯಲಿಲ್ಲ.

ಕಾಗದವನ್ನು ನೋಡಿ 'ಅವರಿಗೇನು ಬಂದಿರುವುದು ದಾರಿದ್ರ್ಯ, ರಾಜಶೇಖರನ ಫೀಸು ಕೊಡುವುದಕ್ಕೂ ಅಳುತ್ತಾರೆ. ಬೇಕಾದರೆ ಓದಿಸಾದರೂ ಓದಿಸಲಿ........ಇಲ್ಲದಿದ್ದರೆ ಬಿಟ್ಟುಬಿಡಲಿ' ಎಂದು ರಾಮು ಕಾಗದವನ್ನು ರೊಪ್ಪನೆ ಅಲ್ಲಿಯೇ ಎಸೆದು ಹೊರಗೆ ಹೊರಟನು.

ಎರಡು ಮೂರು ದಿನಗಳಿಂದ ಕೋಪಕ್ಕೆ ಅವಕಾಶ ದೊರೆತಿರಲಿಲ್ಲ. ಈಗ ಇಷ್ಟು ಸಮಯ ಸಿಕ್ಕಿದ್ದೇ ತಡ ಅದನ್ನು ಒದರಿ ಹೊರಗೆ ಹೊರಟ. ಅವನ ಕೋಪ ಅಷ್ಟಕ್ಕೇ ಮುಗಿಯಲಿಲ್ಲ. ಬಾಗಿಲಲ್ಲೇ ನಿಂತಿದ್ದ ಸೀತಾಲಕ್ಷ್ಮಿಯನ್ನು ನೋಡಿ 'ನಿನ್ನ ಗಂಡನಿಂದ ಆಗಲೇ ದುಡ್ಡಿಗೆ 'ಬುಲಾವ್' ಬಂದಿದೆ. ಎರಡು ತಿಂಗಳಿನದೂ ಒಟ್ಟಿಗೆ ಕಳುಹಿಸಬೇಕಂತೆ. ಯಾರಪ್ಪನ ಮನೆಯಿಂದ ಲೂಟಿಮಾಡಿ ತರಬೇಕಂತೊ?' ಎಂದು ಗೊಣಗುಟ್ಟಿದ.

ಸೀತಾಲಕ್ಷ್ಮಿಯ ಎರಡು ಕಣ್ಣುಗಳಲ್ಲೂ ಒಂದೇ ಸಮನೆ ಹನಿಗಳು ಮೂಡಿದವು. ಮೂಲೆಸೇರಿ ಹೋಗಿ ಬಿಕ್ಕಿ ಬಿಕ್ಕಿ ಅಳುತ್ತಾ ನಿಂತಳು. ರಾಮುವಿನ ಕೂಗಾಟವನ್ನು ಪಾರ್ವತಮ್ಮನವರು ಮೊದಲು ತಮ್ಮ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಆದರೆ ಸೀತಾಲಕ್ಷ್ಮಿಯ ಅಳು ಹೆಚ್ಚಾಗಲು, ಅವಳನ್ನು ಸಮಾಧಾನ ಪಡಿಸಲು ಯತ್ನಿಸಿದರು.

'ಸೀತಾ, ನೋಡು........ಅವನು ಏನು ಕೆಲಸದ ಗಲಾಟೆಯಲ್ಲಿ ಇದ್ದನೋ ಏನೋ........ಆಗ ಅವನಿಗೆ ಕಾಗದ ಕೊಟ್ಟೆವು. ಕೋಪದಲ್ಲಿ ಒಂದೆರಡು ಮಾತು ಅಂದಿರಬಹುದು. ಎಷ್ಟಾದರೂ ಅಣ್ಣನಲ್ಲವೇ ನಿನಗೆ. ಅದನ್ನೆಲ್ಲಾ ಮನಸ್ಸಿಗೆ ತಂದುಕೊಳ್ಳಬಾರದಮ್ಮ' ಎಂದು ಅವಳನ್ನು ಸಂತೈಸಿದರು ಪಾರ್ವತಮ್ಮ.

ಈ ಕೂಗಾಟಗಳಿಗೆಲ್ಲಾ ಕಾರಣವೇನಿರಬಹುದೆಂದು ಪಾರ್ವತಮ್ಮನವರು ಯೋಚಿಸಿದರು. 'ಮಿಲ್ಲು ತನ್ನ ಹೆಸರಿಗಿಲ್ಲವೆಂದು ಈಷ್ಟು ಹಾರಾಟವೇ ... ಮಿಲ್ಲು ನನ್ನ ಹೆಸರಿನಲ್ಲಿದ್ದರೇನು ಅವನ ಹೆಸರಿನಲ್ಲಿದ್ದರೇನು ? ಹೇಗಾದರೂ ಅವನೇ ಮಿಲ್ಲಿನ ಆಡಳಿತಗಳನ್ನು ನೋಡಿಕೊಳ್ಳಬೇಕು. ಹೋಗಲಿ........

ಅವನ ಹೆಸರಿಗೆ ಮಾಡಿಕೊಟ್ಟರೆ ಆಯಿತು....ಸುಶೀಲ ಮತ್ತು ಹುಡುಗರ ಹತ್ತಿರ ಅವನು ಶಾಂತರೀತಿಯಿಂದ ನಡೆದರೆ ಸಾಕು' ಎಂದೆಣಿಸಿದರು.

ಕೊನೆಗೆ ಮಿಲ್ಲಿನ ವಿಷಯದಲ್ಲಿ ನಿರಂತರವೂ ದೂರವಾಗಿರಬೇಕೆಂದೂ ನಿರ್ಧರಿಸಿದರು. ಕೆಲವು ದಿನಗಳ ನಂತರ ರಂಗೈಯ ಶೆಟ್ಟರ ಸಾಲ ತೀರಿಸುವ ವಿಚಾರ ಬಂದಾಗ, ಪಾರ್ವತಮ್ಮನವರು ಮರುಮಾತಾಡದೆ ರಾಮುವಿನ ಹೆಸರಿಗೆ ಮಿಲ್ಲನ್ನು ಮಾಡಿಕೊಟ್ಟರು.

ರಂಗೈಯ ಶೆಟ್ಟರು ಅನುಭವಿಗಳು. ಪಾರ್ವತಮ್ಮನವರ ವಿಷಯವೆಂದರೆ ಅವರಿಗೆ ವಿಶೇಷ ಕರುಣೆ. ರಾಮುವಿನ ಹೆಸರಿಗೆ ಮಿಲ್ಲು ಹೋಗುವುದನ್ನು ಕೇಳಿ ಹೆದರಿದರು. ಇತ್ತೀಚಿನ ಅವನ ಹವ್ಯಾಸಗಳು ಅವರಿಗೂ ಗೊತ್ತಾಗಿದ್ದವು. ರಂಗೈಯ ಶೆಟ್ಟರ ಮುಂದೆಯೇ 'ಟ್ರಾನ್ಸ್‌ಫರ್' ಪತ್ರದ ಬರವಣಿಗೆಯೂ ನಡೆಯಿತು. ನಡುವೆ ತಮ್ಮದೊಂದು 'ಕಂಡೀಶನ್' ಇದೆ; ಅದು ನಡೆದರೆ, ತಾವು ಪತ್ರಕ್ಕೆ ಸಹಿ ಮಾಡುವುದಾಗಿ ತಿಳಿಸಿದರು ಶೆಟ್ಟರು. ರಾಮುಪ್ಪನ ಕಡೆ ತಿರುಗಿ 'ಪತ್ರದ ಪ್ರಕಾರ ಮಿಲ್ಲೇನೋ ನಿನ್ನ ಹೆಸರಿಗೆ ಆಗುವುದು. ಆದರೆ ಅವರ ಸಂಸಾರ ನಿರ್ವಹಿಸುತ್ತೇನೆ ಎಂದು ಬಾಯಲ್ಲಿ ಹೇಳಿದರೆ ಸಾಲದು. ಅದನ್ನೂ ಪತ್ರದಲ್ಲಿ ತೋರಿಸಬೇಕು' ಎಂದು ಒತ್ತಾಯ ಮಾಡಿದರು.

'ಶೆಟ್ಟರೇ, ಅವನಲ್ಲದೇ ಇನ್ಯಾರು ನಡೆಸುವವರು, ಅದೆಲ್ಲಾ ಪತ್ರದಲ್ಲೇಕೆ' ಎಂದಳು ಪಾರ್ವತಮ್ಮ. ರಂಗೈಯ ಶೆಟ್ಟರು ಹಟವಾದಿಗಳು. 'ಪಾರ್ವತಮ್ಮನವರೇ ನಿಮ್ಮ ಮನಸ್ಸು ಹಸುಳೆಗಳಂತೆ ಸಂಸಾರ ನಡೆಸುವುದು ಅವನ ಕರ್ತವ್ಯವೇ ಆಗಿರುವಾಗ ಅದನ್ನೂ ನಮೂದಿಸಿದರೆ ಏನು ತೊಂದರೆ?' ಎಂದು ಪತ್ರದಲ್ಲಿ ಆ ರೀತಿ ಬರೆಸುವಂತೆ ಮಾಡಿದರು. ಒಂದು ವೇಳೆ ಸಂಸಾರ ನಿರ್ವಹಿಸಲು ಆಗದಿದ್ದರೆ ತಿಂಗಳಿಗೆ ಮೂವತ್ತು ರೂಪಾಯಿಗಳನ್ನು ಪಾರ್ವತಮ್ಮನವರಿಗೆ ಕೊಡಬೇಕೆಂಬುದಾಗಿ ಹಠ ಹಿಡಿದು ಬರೆಸಿದರು.

ಮಿಲ್ಲು ತನ್ನ ಹೆಸರಿಗಾದ ದಿನ ರಾಮುಪ್ಪ ಹಿಗ್ಗಿದನು. ತನ್ನ ಸಂತೋಷದ ಚಿಹ್ನೆಗಾಗಿ ಅನಂತಯ್ಯನಿಗೆ ಸಂಭಾವನೆಯನ್ನೂ ಕೊಟ್ಟನು. ಶಾಂತಯ್ಯ ಮಿಲ್ಲಿನಲ್ಲಿ ಮುಖ್ಯಸ್ಥನಾದ.

## ಐದು

ಮಿಲ್ಲು ತನ್ನ ಹೆಸರಿಗಾದ ಮೇಲೆ ಪಾರ್ವತಮ್ಮನವರ ಹಂಗೇನು ಎಂದು ತನ್ನ ಮಿತ್ರರಿಬ್ಬರ ಬೆಂಬಲದಿಂದ ಬೇರೆ ಹೋಗಲು ರಾಮಪ್ಪ ಯೋಚಿಸುತ್ತಿದ್ದನು. ಆದರೆ ಈ ವಿಷಯದಲ್ಲಿ ಅಡಚಣೆಯಾಗಿದ್ದುದು ಸುಶೀಲಳದೇ. 'ಬೇರೆ ಸಂಸಾರ ಹೂಡೋಣ' ಎಂದು ಇವನು ಮಾತೆತ್ತಿದಾಗಲೆಲ್ಲಾ ಅವಳು 'ಒಲ್ಲೆ' ಎನ್ನುತ್ತಿದ್ದಳು. ಒಂದೊಂದು ದಿನ ಬೇಗ ಮನೆಗೆ ಬಂದಾಗ ಅವಳನ್ನು ಒಳ್ಳೆಯ ಮಾತಿನಲ್ಲಿ ಪುಸಲಾಯಿಸುವನು. ಆಗಲೂ ಸಹ 'ಬೇರೆ ಹೋಗುವುದು ಬೇಡ' ಎಂದು ಅವಳು ಕೇಳಿಕೊಂಡಾಗ, ಅವನು ರೇಗಿ ಕೂಗಾಡುವನು. ಏನು ಮಾಡಿದರೂ ತಾನು ತನ್ನತ್ತೆಯನ್ನು ಬಿಟ್ಟು ಬರುವುದಿಲ್ಲವೆಂದು ಹಟ ಹೂಡಿದಳು ಆಕೆ.

ಮಿಲ್ಲಿನಲ್ಲಿ ಶಾಂತಯ್ಯನ ಅಧಿಕಾರ ಬಲವಾಯಿತು. ರಾಮುವೇ ಅವನಿಗೆ ಹೆಚ್ಚು ಸ್ವಾತಂತ್ರ್ಯವನ್ನು ಕೊಟ್ಟಿದ್ದ. ಇದರಿಂದ ತಾನು ಹೆಚ್ಚು ಹೊತ್ತು ವಿಲಾಸದಲ್ಲಿ ಕಳೆಯಬಹುದೆಂದು ಅವನ ಯೋಚನೆ. ಎಷ್ಟೋ ದಿನ ರಾತ್ರೆ ಮನೆಗೇ ಬರುತ್ತಿರಲಿಲ್ಲ. ನಿತ್ಯವೂ ಪಾರ್ವತಮ್ಮ ಸುಶೀಲರು ಅವನ ಆಗಮನವನ್ನೇ ನಿರೀಕ್ಷಿಸುತ್ತಿದ್ದು ಬೇಸತ್ತರು. ಅವನು ಬರುವುದು ಹೊತ್ತಾಗುವುದೆಂದು ತಿಳಿದೊಡನೆಯೇ ಪಾರ್ವತಮ್ಮ ಸುಶೀಲಳಿಗೆ ಊಟ ಬಡಿಸಿ ತಾನು ಮಲಗಲು ಯತ್ನಿಸುತ್ತಿದ್ದಳು.

ಅವೇಳೆಯಲ್ಲಿ ಬಾಗಿಲು ತಟ್ಟುವುದು ರಾಮುವಿಗೆ ರೂಢಿಯಾಯಿತು. ಎಚ್ಚರದಿಂದಿದ್ದ ಪಾರ್ವತಮ್ಮನವರೇನೋ ಬಾಗಿಲು ತರೆಯುತ್ತಿದ್ದರು. 'ರಾಮು, ಇಷ್ಟು ಹೊತ್ತು ಯಾಕಪ್ಪಾ. ಮಿಲ್ಲಿನ ಲೆಖ್ಖ ಬೆಳಿಗ್ಗೆ ನೋಡಿದರೆ ಆಗುವುದಿಲ್ಲವೆ' ಎಂದಾಗಲೆಲ್ಲ 'ಇರುತ್ತದೆಯಲ್ಲ ಕೆಲಸ ..........ಬೆಳಿಗ್ಗೆ ಅಂತ ಹೊರಟರೆ, ಸಾಯಂಕಾಲ ಮಾಡೋಣ ಅನ್ನಿಸುತ್ತದೆ. ಒಂದೇಸಾರಿ ಮುಗಿಸಿದರೆ ತಂಟೆ ಇಲ್ಲಾ.... ...' ಎಂದು ಹೇಳಿ ರಾಮು ತನ್ನ ಕೋಣೆಗೆ ಹೋಗುತ್ತಲಿದ್ದ.

ಈ ವೇಳೆಗಾಗಲೇ ಸುಶೀಲಾ ನಿದ್ರೆಯಲ್ಲಿರುತ್ತಿದ್ದಳು. ಬಸುರಿ ಅಲ್ಲವೇ ಪಾಪ. ಏಳು ತಿಂಗಳು ಅವಳಿಗೆ. ಗಂಡನ ಆಗಮನವನ್ನು ನೋಡು

ತ್ತಿದ್ದಂತೆಯೇ, ನಿದ್ರೆ ಹತ್ತುತ್ತಿತ್ತು. ರಾಮು ಸದ್ದುಮಾಡದೆ ಬೇರೊಂದುಕಡೆ ಹಾಸಿಗೆ ಉರುಳಿಸಿ ಮಲಗುತ್ತಿದ್ದ.

ತನ್ನ ಗಂಡನ ವಿಷಯದಲ್ಲಿ ಸಂಶಯ ಅನಿವಾರ್ಯವಾಗಿ ಅವಳಿಗೆ ತೋರಿ ಬಂದಿತು. ರಾಮುಪ್ಪನ ನಡತೆಯೊಂದೇ ಎಲ್ಲವನ್ನೂ ಬಿಚ್ಚಿ ಹೇಳುವಂತಿತ್ತು. ಜೊತೆಗೆ ಅನಂತಯ್ಯನ ಮಾತುಗಳೂ ನಿರ್ವಾಹವಿಲ್ಲದೆ ಸುಶೀಲಳ ಕಿವಿಗೆ ಬಿದ್ದವು. ಅವಳ ಮನಸ್ಸಿನಲ್ಲಿ ಕೋಪ ಹೆದರಿಕೆಗಳೆರಡೂ ಒಟ್ಟಿಗೆ ಉದ್ಭವಿಸಿ ದವು. ಹಿಂದೇನೇ ಈ ವಿಷಯದಲ್ಲಿ ಸ್ವಲ್ಪ ಅನುಮಾನ ಬಂದಿತ್ತು. ಅವಳಿಗೆ ಆದರೆ ಅದನ್ನು ತನ್ನ ಮನಸ್ಸಿನಿಂದ ದೂರ ತಳ್ಳಿದ್ದಳು. ಅನಂತಯ್ಯ ಪದೇಪದೇ ಆಡುತ್ತಿದ್ದ ಮಾತುಗಳಿಂದ ಅವಳ ಸಂಶಯ ಖಚಿತವೇ ಆದಂತಾ ಯಿತು. ಅತ್ತೆಯವರಿಗೆ ಈ ವಿಷಯವನ್ನು ತಿಳಿಸಬೇಕೆಂಬ ಹಂಬಲ; ಆದರೆ ಎಷ್ಟಾದರೂ ಗಂಡನಲ್ಲವೇ: ಅವನ ವಿಚಾರದಲ್ಲಿ ಹೀಗೆ ಮಾತನಾಡುವುದೇ ಎಂಬ ಭೀತಿ ಬೇರೆ. ಕೊನೆಗೆ ನಿಜ ಸಂಗತಿಯನ್ನು ಗಂಡನಿಂದಲೇ ತಿಳಿ ಯಲು ನಿರ್ಧರಿಸಿದಳು.

ಹೊತ್ತಿಲ್ಲದ ಹೊತ್ತಿನಲ್ಲಿ ರಾಮು ಬಾಗಿಲು ತಟ್ಟುತ್ತಿದ್ದಾಗಲೆಲ್ಲಾ ಕೂಡ ಲೇ ಎದ್ದು ಬರುತ್ತಿದ್ದವರು ಪಾರ್ವತಮ್ಮ. ರಾಮೂಗೆ ಇದರಿಂದ ಬಹಳ ಮುಜುಗರವಾಗುತ್ತಿತ್ತು. ಬಾಗಿಲು ತೆಗೆದು ಅವನು ಬಹಳ ಕಷ್ಟಪಟ್ಟು ಬಂದಿರುತ್ತಾನೆಂದು ಭಾವಿಸಿ ಒಂದೆರಡು ಒಳ್ಳೆಯ ಮಾತುಗಳನ್ನಾಡುತ್ತಿದ್ದರು ಅವರು. ರಾಮುವಿಗೆ ಇವ್ಯೊಂದೂ ಬೇಕಾಗಿರಲಿಲ್ಲ. ಅದಕ್ಕಾಗಿ ಹಾಲಿನ ಬಾಗಿಲನ್ನು ತಟ್ಟುವುದನ್ನು ಬಿಟ್ಟು, ಅಂಗವನ್ನು ಸುತ್ತಿಕೊಂಡು ಬಂದು ರೂಮಿನ ಕಿಟಕಿಯಲ್ಲಿ ಕೂಗಿ ಕೂಗಿ ತನ್ನ ಹೆಂಡತಿಯನ್ನು ಎಬ್ಬಿಸುತ್ತಿದ್ದನು.

ಆದೊಂದು ರಾತ್ರಿ ಸುಶೀಲಾ ಅವನಿಗಾಗಿ ಕಾದೂ ಕಾದೂ ಕೊನೆಗೆ ನಿದ್ರೆ ಬರಲು ಹಾಗೆಯೇ ಮಲಗಿಬಿಟ್ಟಳು. ರಾಮು ಬಂದು ಕೂಗಿದ್ದೂ ಅವ ಳಿಗೆ ಮೊದಲು ಕೇಳಿಸಲಿಲ್ಲ. ಹತ್ತು ಹದಿನೈದು ಸಾರಿ ಅವನು ಕೂಗಿದಮೇಲೆ ಅವಳಿಗೆ ಎಚ್ಚರವಾಗಲು ಬಾಗಿಲನ್ನು ತೆಗೆದಳು.

'ಎಷ್ಟೇ ಕೂಗೋದು ...ಏನು ಮೈಮೇಲೆ ನಿದ್ರೆಕತ್ತೆಸತ್ತು ಬಿದ್ದಿತೇನು.... ಎಂದ ರಾಮು ಒಳಗೆ ಬಂದು.

ನಿತ್ಯವೂ ರಾತ್ರಿ ಹೊತ್ತು ಕಾದು ಬೇಸರವುಂಟಾದ ಮೇಲೇ ಆಕೆಗೆ ನಿದ್ರೆ. ಅದೂ ಅಲ್ಲದೆ ಆದರ ಹಿಂದಿನ ದಿನ ಬಹಳ ಹೊತ್ತು ಎಚ್ಚತ್ತಿದ್ದರೂ ಮನೆಗೆ ಬಂದಿರಲಿಲ್ಲ.

'ಹೌದು, ರಾತ್ರಿಯೆಲ್ಲಾ ಜಪಮಾಡುತ್ತಾ ಕುಳಿತಿದ್ದರೂ ಬರಬೇಡಿ....' ಏನೋ ಏಳೋದು ತಡವಾದ್ದಕ್ಕೆ ಕೂಗಾಟ ಮಾತ್ರ ಬೇಗ ಬರುತ್ತೆ.'

'ಸಾಕು ಮುಚ್ಚೆ....ನಿನ್ನೆ ಸ್ವಲ್ಪ ಕೆಲಸ ಇತ್ತು : ಅದಕ್ಕೇ ಬರಲಿಲ್ಲ, ಏನು ಮಾಡೋಡು. ಗಂಡಸರು ಎಂದರೆ ಏನಾದರೂ ಕೆಲಸವಿರುತ್ತದಲ್ಲಾ ...'

'ರಾತ್ರಿಯೆಲ್ಲಾ ಏನು ಮಹಾ ಕೆಲಸ ಅನ್ನುವುದು ನನಗೂಗೊತ್ತು....' ಎಂದು ಮೆಲುದನಿಯಲ್ಲಿ ಉತ್ತರವಿತ್ತಳು.

ರಾಮುವಿಗಾಗಲೇ ಕೋಪವೇರಿತ್ತು. ಏನು ಮಾತನಾಡಿದರೂ ಎದುರು ವಾದಿಸುತ್ತಾಳಲ್ಲಾ ಎಂದು ಯೋಚಿಸಿ 'ನಿನಗ್ಯಾಕೆ ನಮ್ಮ ವಿಚಾರ. ಬಾಯಿ ಮುಚ್ಚಿಕೊಂಡು ಹೇಳಿದ ಹಾಗೆ ಕೇಳಿಕೊಂಡಿರುವುದು ನಿನ್ನ ಕೆಲಸ' ಎಂದು ಗದರಿಸಿದ.

ತನ್ನ ಮನಸ್ಸಿನಲ್ಲಿ ಅನುಭವಿಸುತ್ತಿದ್ದ ಉದ್ವೇಗವನ್ನು ಹೆಚ್ಚು ಹೊತ್ತು ಹಿಡಿಯಲು ಸುಶೀಲಗಳಿಗೆ ಆಗಲಿಲ್ಲ. 'ರಾತ್ರಿಯೆಲ್ಲಾ ಯಾವ್ಯಾವೋಳ ಮನೆಯಲ್ಲೋ ಕಳೆದರೆ ಕೇಳುವುದಕ್ಕೆ ನನಗೂ ಹಕ್ಕುಂಟು' ಎಂದು ನುಡಿದಳು ಕೋಪದಿಂದ.

ರಾಮುವಿನ ಕೋಪ ಅಸಾಧ್ಯವಾಯಿತು. 'ಬಸುರಿ ಎಂದುಕೊಂಡು ಸುಮ್ಮನಿದ್ದುದಕ್ಕೋ ನಿನ್ನ ಪ್ರತಿಷ್ಟೆ' ಎಂದು ರೊಪ್ಪನೆ ಎರಡು ಕೆನ್ನೆಗಳಿಗೂ ಕೊಟ್ಟನು. ಸುಶೀಲ, 'ಅಯ್ಯೊ, ಅತ್ತೇ ಬಿಡಿಸಿ ನನ್ನಾ' ಎಂದು ಗಟ್ಟಿಯಾಗಿ ಕೂಗಿಕೊಂಡಳು. ರಾಮು ಅಷ್ಟಕ್ಕೇ ಬಿಡಲಿಲ್ಲ. ಸೊಂಟದಲ್ಲಿದ್ದ, ಚಕ್ಕಳದ ಬೆಲ್ಟನ್ನು ಕಳಚಿ, 'ಅತ್ತೇನೇ ಕೂಗೋದು; ಇನ್ನೊಂದು ಸಲ ಹೀಗೆ ಹುಚ್ಚು ಹುಚ್ಚಾಗಿ ಮಾತನಾಡೀಯೆ ಹುಷಾರ್' ಎಂದು ಸುಶೀಲಾ ಕೂಗುತ್ತಿದ್ದರೂ ನಾಲ್ಕು ತೀಡಿದನು. ಅವಳ ಗೋಳು ಮತ್ತು ರಾಮುವಿನ ಕೂಗಾಟವು ಪಾರ್ವತಮ್ಮನವರನ್ನು ಎಚ್ಚರಿಸಿತು.

'ರಾಮು.... ಇದೇನೋ! ಯಾಕೆ ಹಾಗೆ ಹೊಡೆಯುತ್ತೀ ಅವಳನ್ನು' ಎಂದು ಹೇಳಿ ಮುಂದೆ ಬಂದು ರಾಮುವಿನ ಕೈಲಿದ್ದ ಬೆಲ್ಟನ್ನು ಕಿತ್ತು

ಕೊಂಡರು. 'ಬಸುರಿ ಅಲ್ಲವೇನೋ. ಯಾರಾದರೂ ಹಾಗೆ ಹೊಡೆಯುತ್ತಾರಾ?'

'ಬಸುರಿ ಆದರೇನು, ಆಡೋಮಾತಿಗೆ ಮಿತಿ ಇಲ್ಲವೇನು....ರಾತ್ರಿ ಎಲ್ಲೆಲ್ಲೋ ಅಲೀತೀನಂತೆ' ಎಂದು ಕೂಗಾಡಿದ ರಾಮು.

ಸುಶೀಲಾ ಯಾತನೆಯಿಂದ ನರಳುತ್ತಾ ತನ್ನ ಅತ್ತೆಗೆ ಎಲ್ಲವನ್ನೂ ತಿಳಿಸಿದಳು. ಅವಳನ್ನು ತಮ್ಮ ತೊಡೆಯಮೇಲೆ ಮಲಗಿಸಿಕೊಂಡು, 'ಅಯ್ಯೋ ನನ್ನಮ್ಮಯ್ಯಾ ಎಂತಹ ಏಟುಗಳೇ ಇವು' ಎಂದು ಸಮಾಧಾನ ಮಾಡುವುದರ ಜತೆಗೆ ತಾವೂ ಕಂಬನಿಗರೆದರು. ಅವರಿಬ್ಬರೂ ಅಳುತ್ತಿರುವುದನ್ನು ಕಂಡು ರಾಮುವಿಗೆ ಬೇಜಾರು ಬಂತು. 'ಯಾಕೆ ಹೊಡೆಸುಕೊಳ್ಳುತ್ತೀರಾ ಇಬ್ಬರೂ; ಇಲ್ಲಿ ಯಾರೂ ಸತ್ತಿಲ್ಲ' .....'ಅನಿಷ್ಟಮನೆ ಇದು' ಎಂದು ಗೊಣಗುತ್ತಾ ಬೇರೆ ರೂಮಿನಲ್ಲಿ ಮಲಗಲು ಹೊರಟ. ಸುಶೀಲಳಂತೂ ಪಾರ್ವತಮ್ಮನವರ ಕುತ್ತಿಗೆಯನ್ನು ಬಿಗಿಯಾಗಿ ಹಿಡಿದುಕೊಂಡು 'ನನ್ನ ದಮ್ಮಯ್ಯಾ ಅಂತೀನಿ; ನನ್ನನ್ನು ದೂರ ಕಳುಹಿಸಬೇಡಿ' ಎಂದು ಗೋಗರಿಯುತ್ತಾ ಕೇಳಿಕೊಂಡಳು. ಅವಳನ್ನು ಸಮಾಧಾನಗೊಳಿಸಿ ದೂರ ಕಳಿಸುವುದಿಲ್ಲವೆಂದು ಪಾರ್ವತಮ್ಮ ಮಾತು ಕೊಟ್ಟರು. ಅಲ್ಲದೆ ರಾಮು ಶಾಂತವಾಗಿದ್ದ ಹೊತ್ತು ಈ ವಿಚಾರದಲ್ಲಿ ಅವನಿಗೆ ಬುದ್ಧಿಹೇಳುವುದಾಗಿ ಭರವಸೆ ಇತ್ತರು.

ಕೆಲವು ದಿನಗಳಾದನಂತರ ರಾಮು ಮನೆಯಲ್ಲಿದ್ದಾಗ 'ಪಾಪ ಸುಶೀಲಾ ಬಸುರಿ ...ನೀನು ಹಾಗೆ ಮಾಡಬಾರದಪ್ಪಾ. ಒಳ್ಳೇ ಮಾತಿನಲ್ಲಿ ಹೇಳಿದ್ದರೆ ಕೇಳುತ್ತಿರಲಿಲ್ಲವೇ' ಎಂದರು.

ಬೇರೆ ಸಂಸಾರ ಹೂಡುವ ಹುಚ್ಚು ರಾಮಪ್ಪನಿಗೆ. ಏನಾದರೂ ಮಾತು ತೆಗೆದರೆ ಸಾಕೆಂದು ಕಾಯುತ್ತಿದ್ದ. ಪಾರ್ವತಮ್ಮ ಹಾಗೆ ಹೇಳುವುದೇ ಅವನಿಗೆ ಬೇಕಾಗಿತ್ತು.

'ಸಾಕು ಸುಮ್ಮನಿರಿ ಚಿಕ್ಕಮ್ಮಾ ನನಗೆಲ್ಲಾ ಗೊತ್ತು. ನಿಮ್ಮಿಂದಲೇ ಅವಳು ಕೆಟ್ಟು ಹಾಳಾಗಿರುವುದು .. ಅವಳನ್ನು ನಿಮ್ಮಿಂದ ಬೇರೆ ಮಾಡಿದರೆ ಎಲ್ಲಾ ಸರಿಯಾಗುವುದು. ಈಗ ಯಾರ ಹೆದರಿಕೆ ಭಯವೂ ಇಲ್ಲ ಅವಳಿಗೆ. ... ಅದಿರಲಿ, ಹಿಂದಿನ ರಸ್ತೆಯಲ್ಲಿ ಮನೆ ನೋಡಿದ್ದೇನೆ. ಈ ತಿಂಗಳಾಗುತ್ತಲೇ ನಾನು ಸುಶೀಲಾ ಅಲ್ಲಿಗೆ ಹೋಗುತ್ತೇವೆ....' ಎಂದ.

‘ ಅವಳನ್ನು ನೀನು ಹೊಡೆಯಬಾರದಾಗಿತ್ತೆಂದು ಹೇಳಿದ್ದೇ ತಪ್ಪಾಯಿತೇ. ಕೋಪಿಸಿಕೊಳ್ಳಬೇಡ. ಸದ್ಯ ನಾವೆಲ್ಲಾ ಒಟ್ಟಿಗೇ ಇರೋಣ.’ ಎಂದು ಅವನನ್ನು ದುಃಖದಿಂದ ಕೇಳಿಕೊಂಡರು.

‘ ನಾವೆಲ್ಲಿ ದೂರ ಹೋಗುತ್ತೇವೆ, ಚಿಕ್ಕಮ್ಮಾ ; ಹಿಂದಿನ ರಸ್ತೆಯಲ್ಲೇ ಇರುತ್ತೇವೆ....ದಯವಿಟ್ಟು ನಿಮ್ಮ ಸೊಸೆಗೆ ಹೊರಡಲು ಅಣಿಮಾಡಿಕೊಳ್ಳುವಂತೆ ತಿಳಿಸಿ ’ ರೆಂದು ಸಿಟ್ಟುಮುಖ ಹಾಕಿಕೊಂಡು ಹೊರಟನು.

ದುಃಖದಿಂದ ಕದಡಿ ಹೋಗಿದ್ದ ಅವರ ಮನಸ್ಸಿನಲ್ಲಿ ಅನೇಕ ಹುಚ್ಚು ಭಾವನೆಗಳು ಹರಿದವು. ‘ ಅಯ್ಯೋ ದೇವರೇ ಪತಿಯನ್ನು ಕಳೆದುಕೊಂಡೆ. ಅದು ಹೋಗಲಿ ಮಗ, ಸೊಸೆ ಇದ್ದಾರಲ್ಲಾ ಅಂದರೆ ಅವರನ್ನೂ ದೂರ ಮಾಡುತ್ತಿಯಲ್ಲಾ ’ ಎಂದು ಮರುಗಿದರು. ತಾವೂ ತಮ್ಮಿಬ್ಬರು ಮಕ್ಕಳೇ ಇನ್ನು ಮುಂದೆ ಸಂಸಾರ ಮಾಡಬೇಕು ಎಂಬ ವಿಷಯ ಅವರನ್ನು ಸ್ವಲ್ಪ ಭಯಗ್ರಸ್ಥರನ್ನಾಗಿ ಮಾಡಿತು. ಇಲ್ಲಿಯವರಿವಿಗೂ ಜವಾಬ್ದಾರಿಯೆಲ್ಲ ರಾಮಪ್ಪನ ಮೇಲೆ ಇತ್ತು. ಇನ್ನು ಮುಂದೆ ಎಲ್ಲಕ್ಕೂ ತಾವೇ ಹೊಣೆಯಾಗಬೇಕಾಯಿತು. ಸುಮ್ಮನೆ ಯೋಚಿಸಿದರೆ ಅಧೈರ್ಯ ಹೆಚ್ಚುವುದೆಂದು ಬಗೆದು ‘ ಭಗವಂತ, ಎಲ್ಲಾ ನಿನ್ನ ಚಿತ್ತ. ನೀನು ಹೇಗೆ ನಡೆಸಿದರೆ ಹಾಗೆ ಆಗಬೇಕು. ಸದ್ಯ ರಾಮುವನ್ನು ಒಳ್ಳೆಯವನನ್ನಾಗಿ ಮಾಡು ’ ಎಂದು ಬೇಡಿಕೊಂಡು ತಮ್ಮ ಮನಸ್ಸಿನ ದುಗುಡವನ್ನು ಮುಚ್ಚಿಕೊಳ್ಳಲು ಯತ್ನಿಸಿದರು.

ರಾಮುವನ್ನು ಎಷ್ಟು ಬೇಡಿಕೊಂಡರೂ, ಸಾರ್ಥಕವಾಗಲಿಲ್ಲ. ಅವನಿಗಿಂತಲೂ ಸುಶೀಲಳ ವಿಚಾರ ವಿಪರೀತಕ್ಕಿಟ್ಟಿತು. ‘ ನಾನು ನಿಮ್ಮನ್ನು ಬಿಟ್ಟು ಹೋಗುವುದಿಲ್ಲ ಅತ್ತೆ, ಅವರೊಬ್ಬರೇ ಬೇಕಾದರೆ ಹೋಗಲಿ ’ ಎಂದು ಹಟ ಹಿಡಿದಳು. ರಾಮುವೇನೋ ಅವಳು ಈಗ ಬರದಿದ್ದರೆ ಅಷ್ಟೇ ಹೋಯಿತು. ಆ ಮೇಲಂತೂ ನನ್ನ ಮನೆಗೆ ಅವಳನ್ನು ಸೇರಿಸುವುದಿಲ್ಲ ಎಂದು ಖಡಾಖಂಡಿತವಾಗಿ ನುಡಿದ. ಪಾರ್ವತಮ್ಮನವರು ಒಳ್ಳೆಯ ತೊಡಕಿನಲ್ಲಿ ಸಿಕ್ಕಿಕೊಂಡರು. ಸುಶೀಲಳನ್ನು ‘ ಹೋಗಿಬಾಮ್ಮಾ ’ ಎಂದು ಹೇಳಲು ಅವರಿಗೆ ಮನಸ್ಸಿರಲಿಲ್ಲ. ಹಾಗಲ್ಲದೆ ಪಕ್ಷವಹಿಸಿ ಮಾತನಾಡಿದರೆ ಖಂಡಿತವಾಗಿಯೂ ರಾಮು ಸುಶೀಲಳಿಗೆ ಹಿಂಸೆ ಮಾಡುತ್ತಿದ್ದ. ಎಷ್ಟು ಬೇಡಿಕೊಂಡರೂ ತಮ್ಮೊಡನೆ ಇರಲು ಆತ ಒಪ್ಪಿಕೊಳ್ಳಲಿಲ್ಲ. ಈಗ ಕಳುಹಿಸದಿದ್ದರೆ, ರಾಮಪ್ಪ ಮುಂದೆ

ತೊಂದರೆ ಮಾಡಬಹುದೆಂದು ಅವರಿಗೆ ಹೊಳೆಯಿತು. ಎಂತಲೇ ಆಕೆ ತನ್ನ ಗಂಡನೊಡನಿರುವುದು ಧರ್ಮವೆಂದು ಬಗೆದು 'ಸುಶೀಲಾ ......ನಿನ್ನ ಗಂಡ ಅಲ್ಲವೇ....ಅವನ ಮಾತು ನೀನು ಕೇಳಬೇಕವ್ಮಾ' ಎಂದರು.

'ಅತ್ತೇ ಅದಕ್ಕಲ್ಲ ಅಂದರೆ; ಈ ಮನೇಲೇ ಇದ್ದಿದ್ದರೆ ನನ್ನ ಕಷ್ಟ ನಿಮಗೆ ಹೇಳಿಕೊಂಡು ಸುಖವಾಗಿ ಇರಬಹುದಾಗಿತ್ತು. ಇನ್ನು ಮುಂದೆ ಅಲ್ಲಿಗೆ ಹೋದರೆ ನನ್ನ ಗೋಳು ಕೇಳೋರು ಯಾರು?' ಎಂದು ಅಳುವುದಕ್ಕೆ ಪ್ರಾರಂಭಿಸಿದಳು.

'ಅಳಬಾರದಮ್ಮ, ನೀನೇ ಯೋಚಿಸಿ ನೋಡು. ಗಂಡನ ಜೊತೆ ಇರುವುದು ಧರ್ಮವಲ್ಲವೆ?'

'ಅತ್ತೇ, ನೀವೂ ಕೂಡ ನನ್ನನ್ನು ಹೋಗು ಎಂದು ಹೇಳುತ್ತೀರೆಂದು ಭಾವಿಸಿರಲಿಲ್ಲ ...'

ತಮ್ಮ ಕರುಳನ್ನು ಕತ್ತರಿಸಿ ಕೊಂಡಂತಾಯಿತು ಪಾರ್ವತಮ್ಮನವರಿಗೆ. ತಮ್ಮ ವಿಷಯದಲ್ಲಿ ಸುಶೀಲಾ ತಪ್ಪು ಭಾವನೆಯನ್ನು ಹೊಂದಿದುದಕ್ಕಾಗಿ ವ್ಯಥೆ ಪಟ್ಟರು. ಆ ಮೇಲೆ ಅವಳನ್ನು ಹತ್ತಿರ ಕೂರಿಸಿಕೊಂಡು, ರಾಮುವನ್ನು ತಾವು ಮಗನಿಗಿಂತ ಹೆಚ್ಚಾಗಿ ಭಾವಿಸಿದ್ದರೆಂದೂ ಅವನು ಬೇರೆ ಹೋಗುವುದರಿಂದಾಗುವ ಪುತ್ರಶೋಕವು ಪತಿವಿಯೋಗ ಸಮಾನವೆಂದೂ ಹೇಳಿ ಸಮಾಧಾನ ಪಡಿಸಿದರು. ರಾಮುವಿನ ಜೊತೆಗೆ ಆಕೆ ಹೋಗದಿದ್ದರೆ ಆತ ಮತ್ತಷ್ಟು ದುರ್ಮಾರ್ಗಕ್ಕೆ ಇಳಿಯಬಹುದೆಂಬ ವಿಷಯವನ್ನೂ ಸೂಕ್ಷ್ಮ ದಲ್ಲಿ ತಿಳಿಸಿದರು. ರಾಮುವಿನೊಡನೆ ಆಕೆ ಹೋಗಬೇಕೆಂದುದು ಮುಂದೆ ಅವನು ತೊಂದರೆ ಮಾಡದಿರಲಿ ಎನ್ನುವುದಕ್ಕಾಗಿಯೇ ಎಂದರು.

ಸುಶೀಲಾ ಹೊರಡುವಾಗ ಅತ್ತೆಯ ಕಾಲುಗಳನ್ನು ಮುಟ್ಟಿ ನಮಸ್ಕಾರ ಮಾಡಿದಳು. 'ಅತ್ತೆಯವರೇ ನಾನು ಅಂದ ಮಾತನ್ನು ಮನಸ್ಸಿಗೆ ತೆಗೆದು ಕೊಳ್ಳಬೇಡಿ. ವ್ಯಥೆಯಲ್ಲಿ ಹುಚ್ಚು ಹುಚ್ಚಾಗಿ ಮಾತನಾಡಿದೆ. ನಿಮ್ಮನೇಲಿ ರುವವರಿಗೂ ನನಗೇನೂ ಕಷ್ಟವಾಗಲಿಲ್ಲ. ಇನ್ನು ಮುಂದೆ ನನ್ನ ಕಷ್ಟಗಳು ಪ್ರಾರಂಭವಾಗುವುವು' ಎಂದು ಹೇಳುತ್ತಾ ಕಣ್ಣೀರುಗರೆದಳು. ಪಾರ್ವತಮ್ಮ ನವರು ಅವಳ ಮನಸ್ಸಿಗೆ ಹಿತವಾಗುವಂತೆ ನಾಲ್ಕು ಮಾತನ್ನಾಡಿದರು.

ಅನಂತಯ್ಯನೂ ಅಕ್ಕನ ಮನೆಯನ್ನು ತೊರೆದ. ರಾಮಪ್ಪನ ಮನೆಗೆ ಹತ್ತಿರದಲ್ಲೇ ಒಂದು ರೂಮನ್ನು ಬಾಡಿಗೆಗೆ ಮಾಡಿಕೊಂಡ. ಹೊಸ ಮನೆ, ಹೊಸ ಸಂಸಾರವೆಂದು ಪಾರ್ವತಮ್ಮನವರು ಸ್ವಲ್ಪ ಅಣಿಮಾಡಿ ಬರೋಣ ವೆಂದು ಹೊರಟಿದ್ದರು. ಆದರೆ ಶಾಂತಯ್ಯನೇ ಅವರ ಮನೆಗೆ ಬಂದು ಹೊಸ ಮನೆ ಎಲ್ಲವೂ ಅಚ್ಚುಕಟ್ಟಾಗಿದೆ ಎಂದು ತಿಳಿಸಿ ಪಾರ್ವತಮ್ಮನವರು ಬರ ಬೇಕಾಗಿಲ್ಲವೆಂದು ರಾಮಪ್ಪನು ಅಭಿಪ್ರಾಯ ಪಟ್ಟ ಹಾಗೂ ತಿಳಿಸಿದ. ಕೊನೆಗೆ ಪಾರ್ವತಮ್ಮನವರ ಖರ್ಚಿಗೆ ಸ್ವಲ್ಪ ದುಡ್ಡು ಕೂಡ ಕೊಟ್ಟು ಬಾ ಎಂದು ಹೇಳಿದ್ದಾನೆ ಎಂದ ಪಾರ್ವತಮ್ಮನವರ ಹೃದಯದಲ್ಲಿ ಅತ್ಯಂತ ವೇದನೆ ಯಾಯಿತು. ಆದರೂ ತೋರಿಸಿಕೊಳ್ಳದೆ ತಮಗೇನೂ ಬೇಕಾಗಿಲ್ಲವೆಂದರು. ರಾಮು ಏನೆಂದರೂ ಪರವಾಗಿಲ್ಲ, ಸುಶೀಲಳಿಗೆ ಹೊಸಮನೆ ಒಗ್ಗಿದೆಯೋ ಇಲ್ಲವೋ ನೋಡಬೇಕೆಂದು ಧೈರ್ಯಮಾಡಿಕೊಂಡು ಅವರ ಮನೆಗೆ ಹೊರ ಟರು. ಪಾರ್ವತಮ್ಮನನ್ನು ನೋಡಿ ಸಿಡುಕು ಮೋರೆ ಹಾಕಿಕೊಂಡು "ಯಾಕೆ ಬಂದೆ ?" ಎಂದು ವಿಚಾರಿಸಿ ರಾಮುವು ಹೊರಗೆ ಹೊರಟ. ಪಾರ್ವ ತಮ್ಮ ಸ್ವಲ್ಪ ಹೊತ್ತು ಸುಶೀಲಳ ಹತ್ತಿರ ಮಾತನಾಡಿ ಮನೆಗೆ ಹಿಂದಿರುಗಿ ದರು. ರಾತ್ರಿ ಮನೆಗೆ ಬಂದ ರಾಮು ಸುಶೀಲಳನ್ನು ಕರೆದು 'ಏನೇ ಚಿಕ್ಕ ಮ್ಮನ ಮುಂದೆ ಅಳುತ್ತಾ ಏನೇನೊ ಬೊಗಳುತ್ತಿದ್ದೆಯಲ್ಲಾ....ನಾಳೆಯಿಂದ ನೀನೇನಾದರೂ ನಿಮ್ಮತ್ತೆ ಮನೆಗೆ ಹೋದರೆ ಹುಷಾರ್....' ಎಂದು ಅಪ್ಪಣೆ ಮಾಡಿದ. ಮಮತೆಯ ಮನಸ್ಸಿಗೆ ಬಂಗಾರದ ಮುಳ್ಳನ್ನು ನಾಟಿಸಿಕೊಂಡು ಬಂದ ಪಾರ್ವತಮ್ಮನವರು, ಸೋತಮುಖದಿಂದ ಯೋಚನೆ ಮಾಡುತ್ತಾ ರಾತ್ರಿ ಕಳೆದರು.

ರಾತ್ರಿಯೆಲ್ಲಾ ಅವರ ಮನದಲ್ಲಿ ಏನೇನೋ ನೆನಪುಗಳು. ಹಿಂದೆ ಅದೇ ಮನೆಯಲ್ಲಿ ನಡೆಯುತ್ತಿದ್ದ ಸಂಭ್ರಮದ ಚಿತ್ರ ಅವರ ಮುಂದೆ ನಿಂತು ದುಃಖವನ್ನು ಹೆಚ್ಚಿಸಿತು. ಹಾಗೆಯೇ ಪತಿಯ ಜ್ಞಾಪಕವಾಗುತ್ತಲೂ ಅವರ ಸೆರಗೆಲ್ಲಾ ನೆನೆದವು. ಪಕ್ಕದಲ್ಲಿಯೇ ಮಲಗಿದ್ದ ಇಬ್ಬರು ಮಕ್ಕಳ ಭವಿಷ್ಯ ಅವರ ಮನವನ್ನು ಹೊಕ್ಕವು. ಸೀತಾಲಕ್ಷ್ಮಿಯದೇನೋ ಮದುವೆಯಾಗಿತ್ತು. ಅವಳ ವಿಚಾರದಲ್ಲಿ ಹೆಚ್ಚೇನೂ ಯೋಚಿಸಬೇಕಾಗಿರಲಿಲ್ಲ. ಭಾಗ್ಯಳ ವಿಷ ಯವೂ ಅಷ್ಟೇ... ಇನ್ನೂ ಕೆಲವು ವರ್ಷ ಅವಳ ಮದುವೆಯ ಯೋಚನೆ

ಯನ್ನು ದೂರ ತಳ್ಳಬಹುದಾಗಿತ್ತು. ಆದರೆ ಹೊಟ್ಟೆ ಬಟ್ಟೆಗೆ ಯಾವ ಮಾರ್ಗ? ಮಿಲ್ಲಿನ ಸಂಬಂಧವೂ ಕೈಬಿಟ್ಟಿತ್ತು. ರಾಮುವಿನಿಂದ ಜೀವನಾಂಶ ವೇನೂ ಬರುವ ಹಾಗಿರಲಿಲ್ಲ. ಇದ್ದ ಸಣ್ಣ ಜಮೀನೇ ಸದ್ಯಕ್ಕೆ ಅವರ ಸಂಸಾರಕ್ಕೆ ಆಧಾರ. ವಾಸಕ್ಕೆ ದಿವಂಗತ ರಾಯರು ಮಾಡಿದ್ದ ಮನೆಯೇ ಸಾಧನ. ಆದರೂ ಹೆಣ್ಣು ಹೃದಯತಾನೆ! ಎದೆಗೆಡಲಿಲ್ಲ; ಗಡುಸಾಯಿತು. ಮುಂದೆಯೂ ಕಾಲವನ್ನು ಧೈರ್ಯದಿಂದ ದಬ್ಬಲು ಮನಸ್ಸು ಮಾಡಿದರು.

ಎಲ್ಲರ ಕಷ್ಟಗಳಲ್ಲಿಯೂ ಸಮಭಾಗ ವಹಿಸುತ್ತಿದ್ದುದು ಪಾರ್ವತಮ್ಮ ನವರ ವಿಶೇಷ ಗುಣ. ತಮ್ಮ ಯಜಮಾನರಿದ್ದಾಗ ಮಿಲ್ಲಿನ ಕೆಲಸಗಾರರ ಯೋಗ ಕ್ಷೇಮ ವಿಚಾರಿಸುತ್ತಿದ್ದರು. ಅದು ರಾಮಪ್ಪನ ಕೈಗೆ ಹೋದಮೇಲೆ ಅವೆಲ್ಲ ವನ್ನೂ ಬಿಡಬೇಕಾಯಿತು. ಮಿಲ್ಲಿನ ಕೆಲಸಗಾರರು ಅವರ ಕರುಣಾಜನಕ ಪರಿಸ್ಥಿತಿಯನ್ನು ನೋಡಿ ಮರುಗಿದರು. 'ಅಯ್ಯೋ ಆ ಮಹಾ ತಾಯಿಯನ್ನು ರಾಮಪ್ಪನವರು ಯಾಕೆ ಸುಮ್ಮನೆ ಹಿಂಸಿಸುತ್ತಾರೋ. ಚಿನ್ನದಂತಹ ಹೆಂಗಸು. ಎಂದೂ ಯಾರಿಗೂ ಕೆಟ್ಟ ಮಾತನಾಡುತ್ತಿರಲಿಲ್ಲ' ಎಂಬುದಾಗಿ ಆಕೆಯ ವಿಚಾರದಲ್ಲಿ ಮರುಗುತ್ತಿದ್ದರು.

## ಆರು

ರಾಮು ಬೇರೆಯಾದ ಮೇಲೆ ಪಾರ್ವತಮ್ಮನವರು ಮನೆಯ ಖರ್ಚಿನಲ್ಲಿ ಎಚ್ಚರದಿಂದಿರಬೇಕಾಯಿತು. ಎಂದಿನಂತೆ ಸೀತಾಲಕ್ಷ್ಮಿಯ ಗಂಡನಿಂದ ಫೀಜಿಗೆ ಕಾಗದ ಬರುತ್ತಿತ್ತು. ಹಿಂದೊಮ್ಮೆ ಕಾಗದ ಬಂದಾಗ ಪಾರ್ವತಮ್ಮ ಅದನ್ನು ರಾಮುವಿಗೆ ತೋರಿಸಿರಲಿಲ್ಲ. ಯಾರಿಗೂ ಗೊತ್ತಾಗದಂತೆ ತಮ್ಮ ಕೈ ಬಳೆಯನ್ನು ಮಾರಿ ಬಂದ ಹಣವನ್ನು ರಾಜಶೇಖರನಿಗೆ ಕಳುಹಿಸಿದ್ದರು. ಅವನಿಂದ ಕಾಗದ ಬಂದಂತೆಲ್ಲಾ ಅವರ ಮೈಮೇಲಿನ ಯಾವುದಾದರೊಂದು ಒಡವೆ ಮಾಯವಾಗುತ್ತಿತ್ತು.

ರಾಜಶೇಖರನದು ಇದೇ ಕೊನೆಯ ವರ್ಷ. ಆದುದರಿಂದ ಹಣವನ್ನು ಕಳುಹಿಸದಿದ್ದರೆ ಅವನ ವಿದ್ಯಾಭ್ಯಾಸಕ್ಕೆ ಕಲ್ಲುಹಾಕಿದಂತಾಗುತ್ತಿತ್ತು.

ಪರೀಕ್ಷೆ ಮುಗಿದ ಮೇಲೆ ಅವನಿಗೆ ನಿಷೇಕವನ್ನು ಮಾಡಬೇಕೆಂದು ಆಗಲೇ ತೀರ್ಮಾನವಾಗಿತ್ತು. ಈ ವಿಷಯದಲ್ಲಿ ನಂಜಪ್ಪನವರ ಹೆಂಡತಿ

ಯುವರದೇ ಬಹಳ ಹಾರಾಟ. ಎಂತಲೇ ಆ ಶುಭಕಾರ್ಯಕ್ಕೆ ಸ್ವಲ್ಪ ಹಣ ವನ್ನು ಕೂಡಿಸಲು ಪಾರ್ವತಮ್ಮ ಯತ್ನಿಸುತ್ತಿದ್ದರು.

ಸುಶೀಲಳ ಹೆರಿಗೆ ಸಮೀಪಿಸುತ್ತಾ ಬಂತು. ಅವಳ ನೋವಿನ ಸಮಾ ಚಾರ ಪಾರ್ವತಮ್ಮನವರಿಗೆ ತಿಳಿಯಿತು. ಒಬ್ಬ ಹೆಂಗಸನ್ನು ರಾಮುವೇನೋ ಗೊತ್ತುಮಾಡಿದ್ದ. ಆದರೆ ಸುಶೀಲಳ ಹೆರಿಗೆಯಾಗುವವರೆಗೂ ಮನೆಯನ್ನೇ ನೇರಲಿಲ್ಲ. ತನ್ನ ಅತ್ತೆಗೆ ಹೇಳಿ ಕಳುಹಿಸಬೇಕೆಂದು ಸುಶೀಲಾಗೆ ಬಹಳ ಆಸೆ. ನೋವು ತಿನ್ನುತ್ತಿದ್ದಾಗ ತನ್ನ ಗಂಡನ ನೆರವಿಗಾಗಿ ತಾನು ಬಹಳ ಹಂಬಲ ಪಟ್ಟಳು. ತನ್ನ ಗಂಡನು ಎಷ್ಟೇ ಕ್ರೂರಿಯಾಗಿದ್ದರೂ ಆ ಸಮಯದಲ್ಲಿ ಎಲ್ಲವೂ ಮರೆತು ಹೋಗುತ್ತದೆ. ಆಗ ಬೇಕಾದ್ದು ಆತನ ಹತ್ತಿರ ಇರ ಬೇಕೆಂಬ ಆಸೆ. ಆದರೆ ರಾಮೂಗೆ?... ಹೇಳಿ ಕಳುಹಿಸಿದಳು. ಮುಂಚೆ ಆತ ಬರಲಿಲ್ಲ. ಸ್ವಾಭಾವಿಕವಾಗಿ ತನ್ನ ಅತ್ತೆಯ ಕಡೆಗೆ ಮನಸ್ಸು ತಿರುಗಿತು. ಹೇಳಿ ಕಳುಹಿಸಬೇಕೆಂದು ಯೋಚಿಸಿದಳು. ಆದರೆ ತನ್ನ ಗಂಡನಿಗೆ ಹೆದರಿ ಹಾಗೆ ಮಾಡಲಿಲ್ಲ.

ಸುಶೀಲಾ ಬಹಳ ಸಂಕಟಪಡುತ್ತಿದ್ದಾಳೆಂದು ಗೊತ್ತಾದಮೇಲೆ ರಾಮಪ್ಪ ಮನೆಗೆ ಬಂದ. ಬಂದವನೇ ಹೊರಗೆ ಟಾಕ್ಸಿ ಮಾಡಿ ತಂದಿರುವೆನೆಂದೂ ಆಸ್ಪತ್ರೆಗೆ ಸೇರಿಸಿ ಬರುವುದಾಗಿಯೂ ತಿಳಿಸಿದ.

ಸುಶೀಲ ರಾಮುವಿನ ಕಾಲುಗಳನ್ನು ಬಿಗಿಯಾಗಿ ಹಿಡಿದುಕೊಂಡು 'ಬಹಳ ಸಂಕಟ ಆಗುತ್ತಿದೆ. ನನ್ನ ಹತ್ತಿರಲೇ ನೀವು ಇರಬೇಕು. ಬೇಡಿ ಕೊಳ್ಳುತ್ತೇನೆ' ಎಂದು ಕೇಳಿಕೊಂಡಳು. ಅವಳ ಹಿಡಿತದಿಂದ ಬಿಡಿಸಿ ಕೊಳ್ಳುತ್ತಾ 'ಆಗಲಿ ಆಸ್ಪತ್ರೆಗೆ, ಸುಶೀಲಾ ಸೇರಿಸಿದರೆ ಎಲ್ಲಾ ಸರಿಹೋಗು ತ್ತದೆ' ಎಂದ ರಾಮು.

'ಏನೇ ಆಗಲಿ ಈ ಕಷ್ಟ ಕಳೆಯುವವರೆವಿಗೂ ನೀವು ನನ್ನನ್ನು ಬಿಡ ಬಾರದು... ಅಯ್ಯೋ; ವಿಪರೀತ ನೋವು. ತಡೀಲಾರೆ....ಏನು ಮಾಡಲಪ್ಪಾ' ಎಂದು ಅಲ್ಲಿಯೇ ಹೊರಳಾಡಿದಳು.

ಮನೆಗೆ ಬಂದಿದ್ದೇ ತಪ್ಪಾಯಿತಲ್ಲಾ ಎಂದು ಬಗೆದು ನಾಲ್ಕು ಒಳ್ಳೇ ಮಾತನಾಡಿ ಟಾಕ್ಸಿಯಲ್ಲಿ ಸುಶೀಲಳನ್ನು ಆಸ್ಪತ್ರೆಗೆ ಸೇರಿಸಿದನು. ಅಲ್ಲಿಗೂ ದೀನ ನೋಟದಿಂದ ರಾಮುವನ್ನು ಅಲ್ಲಿಯೇ ಇರುವ ಹಾಗೆ ಗೋಗರೆದು

ಕೊಂಡಳು. ಈಗಲೇ ಬಂದುಬಿಡುತ್ತೇನೆ ಎಂದ ರಾಮು ಚಂದ್ರಳ ಮನೆಗೆ ಹೊರಟ.

ಸುಶೀಲಾ ಕಷ್ಟಪಡುತ್ತಿರುವುದು ತಿಳಿಯುತ್ತಲೂ ಪಾರ್ವತಮ್ಮನವರು ದೃಢಮನಸ್ಸಿನಿಂದ ರಾಮುವಿನ ಮನೆಗೆ ಹೊರಟರು. ಅಷ್ಟುಹೊತ್ತಿಗೆ ಸುಶೀಲಾ ಆಸ್ಪತ್ರೆ ಸೇರಿದ್ದಳು. ಬಹಳ ದುಃಖದಿಂದ, ಏನು ಮಾಡಲೂ ತೋಚದೆ ಮನೆಗೆ ಹಿಂತಿರುಗಿ ಬಂದರು. ಬಹಳ ಕಷ್ಟದಿಂದ ಸುಶೀಲಾ ಗಂಡು ಮಗು ವನ್ನು ಹೆತ್ತಳು. ವಿಚಾರ ಸ್ವಲ್ಪ ಹೊತ್ತಾದ ಮೇಲೆ ಅವರಿಗೆ ತಿಳಿಯಿತು. ಆ ಸುದ್ದಿಯನ್ನು ಕೇಳಿದ ಮೇಲೆ ಅವರಿಗೆ ಮನೆಯಲ್ಲಿ ನಿಲ್ಲಲೂ ಆಗಲಿಲ್ಲ. ಭಾಗ್ಯಳನ್ನು ಜೊತೆ ಮಾಡಿಕೊಂಡು ಆಸ್ಪತ್ರೆಗೆ ಹೋದರು.

ಸುಶೀಲಾ ಬಹಳ ಕಂಗೆಟ್ಟಿದಳು ಪಾರ್ವತಮ್ಮ ಅವಳನ್ನು ಉಪಚರಿಸಿ ತಾವು ತಂದಿದ್ದ ಕಾಫಿಯನ್ನು ಕೊಟ್ಟರು. ಅವರನ್ನು ಕಂಡಕೂಡಲೇ ಸುಶೀಲಳ ಕಣ್ಣುಗಳಲ್ಲಿ ನೀರು ಫಳಫಳನೆ ಹರಿಯಲು ಪ್ರಾರಂಭವಾಯಿತು. 'ಅತ್ತೇ ನನ್ನ ಕಷ್ಟಾನ ಏನೆಂದು ಹೇಳಲಿ ರಾತ್ರಿಯ ಹೊತ್ತು ಮನೆಗೇ ಬರುವುದಿಲ್ಲ' ಎಂದು ಒಂದೇ ಉಸುರಿಗೆ ಅಳುವುದಕ್ಕೆ ಆರಂಭಿಸಿದಳು. 'ಸುಶೀಲಾ, ನಾವಿಬ್ಬರೂ ಪ್ರಪಂಚದಲ್ಲಿ ಸುಖ ಪಡೆಯಲು ಭಾಗ್ಯಪಡೆ ದಿಲ್ಲಾಂತ ಕಾಣುತ್ತೆ. ಬಂದುದನ್ನು ಅನುಭವಿಸಿಯೇ ಬಿಡೋಣ....ಅಳ ಬೇಡ....ದಮ್ಮಯ್ಯಾ ಅಂತೀನಿ ...ಬಾಣಂತಿ ನಂಜಾಗುತ್ತೀಯಾ....' ಎಂದು ಪಾರ್ವತಮ್ಮ ಸಮಾಧಾನ ಮಾಡಿದರು. ಸುಶೀಲಳ ದುಗುಡ ಅಲ್ಲಿಗೇ ನಿಲ್ಲ ಲಿಲ್ಲ. 'ಅತ್ತೇ ದೇವರು ನನಗ್ಯಾಕೆ ಸಾಯಿಸಲಿಲ್ಲವೋ ಕಾಣೆ.. ಸತ್ತು ಹೋಗಿದ್ದರೆ ಅವರಿಗೂ ಸುಖವಾಗುತ್ತಿತ್ತು ನನಗೂ ಚೆನ್ನಾಗಿರುತ್ತಿತ್ತು.' ಎಂದು ಅತ್ತಳು.

'ಸುಮ್ಮನೆ ಹಾಗೆಲ್ಲಾ ಮಾತನಾಡಬೇಡ. ಬಳಲಿಕೆ ಆಗುವುದು. ದೇವರು ಇಂದಲ್ಲಾ ನಾಳೆ ಒಳ್ಳೇ ಬುದ್ಧಿ ಕೊಟ್ಟೇಕೊಡುತ್ತಾನೆ....ಅದನ್ನೇ ಮನಸ್ಸಿನಲ್ಲಿಟ್ಟು ವ್ಯಥೆಪಡಬಾರದು' ಎಂದು ಸಮಾಧಾನಗೊಳಿಸಿದರು. ಪಾರ್ವತಮ್ಮ ಮನೆಗೆ ಬರುವಾಗ ರಾಮು ಗೊತ್ತು ಮಾಡಿದ್ದ ಹೆಂಗಸಿಗೆ, ಸುಶೀಲಳನ್ನು ಸರಿಯಾಗಿ ನೋಡಿಕೊಳ್ಳಬೇಕೆಂದು ಹೇಳಿದರು.

ಈ ವೇಳೆಗಾಗಲೇ ಸೀತಾಲಕ್ಷ್ಮಿ ಮೈನೆರೆದು ನಿಂತಿದ್ದಳು. ನಂಜಪ್ಪ ನವರ ಹೆಂಡತಿಯಂತೂ ಮೂರನೆಯ ಮುಟ್ಟಾಗುವುದೇ ತಡ ನಿಷೇಕಕ್ಕೆ ಒತ್ತಾಯಗೊಳಿಸಿದರು. ನಂಜಪ್ಪನವರೂ ಕೂಡ ರಾಜಶೇಖರನಿಗೆ ವಯ ಸ್ಸಾಗಿದೆಯೆಂದೂ, ನಿಷೇಕವನ್ನು ಬೇಗನೆ ಮಾಡಿಯೇ ಬಿಡಬೇಕೆಂದೂ ಮಾತು ಸೇರಿಸಿದರು. ಸಮಯಕ್ಕೆ ಸರಿಯಾಗಿ ರಾಜಶೇಖರನ ಪರೀಕ್ಷೆಯು ಮುಗಿದು ಬೇಸಿಗೆ ರಜ ಬಂತು.

ನಿಷೇಕವೇನೋ ಸಾಂಗವಾಗಿ ಸಾಗಿತು. ಪಾರ್ವತಮ್ಮನವರು ಮಿತ ಖರ್ಚಿನಲ್ಲಿಯೇ ಮುಗಿಸಿದರು. ರಾಜಶೇಖರ ಮಾತ್ರ ಈ ಕಾರ್ಯಕ್ಕೆ ಒಪ್ಪಿ ರಲಿಲ್ಲ. ಅವರಿವರ ಒತ್ತಾಯದ ಮೇಲೆ ಅವನು ಒಪ್ಪಿಕೊಳ್ಳಬೇಕಾಯಿತು.

ನಾಲ್ಕು ದಿನಗಳಿದ್ದು ಹೋಗಬೇಕೆಂದು ಪಾರ್ವತಮ್ಮನವರು ರಾಜ ಶೇಖರನನ್ನು ಕೇಳಿಕೊಂಡರು. ಮುಂಚಿನಿಂದಲೂ ಪಾರ್ವತಮ್ಮನವರಲ್ಲಿ ಬಳಕೆ ಜಾಸ್ತಿ. ಹಾಗೆ ಕೇಳಿಕೊಳ್ಳುತ್ತಲೆ ಮರುಮಾತಾಡದೆ ಒಪ್ಪಿಕೊಂಡನು.

ಅಂದು ಊಟಕ್ಕೆ ಬಡಿಸುತ್ತಿದ್ದಾಗ ಇದ್ದಕಿದ್ದ ಹಾಗೆಯೇ ಪಾರ್ವತಮ್ಮ ನವರ ಕಣ್ಣುಗಳಲ್ಲಿ ಹನಿಗಳು ಮೂಡಿದವು. ತಮ್ಮ ಯಜಮಾನರಿದ್ದಿದ್ದರೆ ಮಾಡುತ್ತಿದ್ದ ವೈಭವದ ಉಪಚಾರವನ್ನೂ ಈಗ ತಾವು ಮಾಡುತ್ತಿದ್ದ ಉಪ ಚಾರವನ್ನೂ ನೆನಸಿಕೊಳ್ಳುತ್ತ ದುಃಖಿಸಿದರು. ರಾಜಶೇಖರ ಸ್ವಲ್ಪ ಯೋಚ ನಾಪರ. ಅವನಿಗೂ ಪಾರ್ವತಮ್ಮನವರ ಕಷ್ಟಮಯ ಜೀವನ ಗೊತ್ತಿತ್ತು.

'ಯಾಕೆ ಅಳುತ್ತೀರಾ ಅತ್ತೆ....ಈಗೇನು ಊಟ ಉಪಚಾರಗಳೊಂದೂ ಕಡಿಮೆಯಾಗಿಲ್ಲವಲ್ಲಾ...' ಎಂದ. ಪಾರ್ವತಮ್ಮನವರ ವೇದನೆ ಹೆಚ್ಚಾ ಯಿತು. 'ನೀನು ನನ್ನ ಮಗನಂತೆಯೇ ಇದ್ದಿಯಾ; ಅದರಿಂದ ನಿನಗೆ ನಾವು ಉಪಚಾರ ಮಾಡಲಿಲ್ಲ, ಅನ್ನುವ ಭಾವ ಬರುವದಿಲ್ಲಪ್ಪಾ.'

ಆದರೆ ರಾಜಶೇಖರ ಮಾತ್ರ ತನಗೆ ಅತ್ತೆಯವರು ಬಹಳ ಉಪಚಾರ ಮಾಡುತ್ತಿದ್ದಾರೆಂದೇ ತಿಳಿದಿದ್ದ.

ಒಂದು ಒಳ್ಳೆಯ ದಿನ ನೋಡಿ ಸೀತಾಲಕ್ಷ್ಮಿಯನ್ನು ರಾಜಶೇಖರ ಕೂಡ ಕಳುಹಿಸಿಕೊಟ್ಟರು. ಆಗ ಮಾತ್ರ ಪಾರ್ವತಮ್ಮನವರ ದುಃಖ ಅಸಾಧ್ಯವಾಗಿತ್ತು. ಆ ಜೀವನಕ್ಕೆ ಯಾರಾದರೊಬ್ಬರು ಹತ್ತಿರವಿರಲೇ ಬೇಕಾಗಿತ್ತು. ಈ ಸಂಗತಿಯ ನಿಜಾಂಶವು ಪಾರ್ವತಮ್ಮನವರಿಗೂ ಅರಿ

ವಾಗುತ್ತಾ ಬಂದಿತು. ತಮ್ಮ ಯಜಮಾನರಿರುವವರಿಗೂ ಈ ಯೋಚನೆಯೇ ಬಂದಿರಲಿಲ್ಲ. ಅವರು ಮಡಿದನಂತರ ರಾಮು ಸುಶೀಲ ಹತ್ತಿರವಿದ್ದುದರಿಂದ ಒಂದು ಧೈರ್ಯ ಉಂಟಾಗಿತ್ತು. ಆದರೆ ವಿಧಿಯು ಪಾರ್ವತಮ್ಮನವರಿಂದ ರಾಮು. ಸುಶೀಲರನ್ನು ಬೇರೆ ಮಾಡಿತ್ತು. ರಾಮು ತಮ್ಮ ಹತ್ತಿರಲೇ ಬರುತ್ತಾರೆಂಬ ಆಶಾಭಾವನೆ ಅವರಿಗೆ. ಅನಂತರ ಸೀತಾಲಕ್ಷ್ಮಿಯ ಅಗಲಿಕೆಯೂ ಬಂತು. ರಾಮು ಅಗಲಿದ ಮೇಲೆ ಅವರಿಗಿದ್ದುದು ಇಬ್ಬರು ಹೆಣ್ಣುಮಕ್ಕಳು. ಅದರಲ್ಲಿ ಸೀತಾಲಕ್ಷ್ಮಿಯ ಅಗಲಿಕೆ ಈ ಖಚಿತವಾದಂತಾಯಿತು. ತಮ್ಮ ಜೀವನವನ್ನು ಸಾಗಿಸುವುದು ಅವರಿಗೆ ಕಷ್ಟಕರವಾಗಿ ಕಾಣಲಿಲ್ಲ. ಆದರೆ ತಮ್ಮೊಡಗೂಡಿ ಇರುವಂತಹರೊಬ್ಬರು ಅವರ ಜೀವಕ್ಕೆ ಬೇಕಾಗಿದ್ದರು. ಪ್ರಯಾಣದ ಹಿಂದಿನ ರಾತ್ರಿ ತಾಯಿ ಮಕ್ಕಳಿಬ್ಬರಿಗೂ ನಿದ್ರೆಯಿರಲಿಲ್ಲ. ಸೀತೆಯಂತೂ ತಾಯಿಯಿಂದ ದೂರ ಹೋಗಬೇಕಲ್ಲಾ ಎಂದು ಸಂಕಟಪಡುತ್ತಾ ರಾತ್ರಿಯನ್ನು ಕಳೆದಳು.

ಈ ವಿಚಾರಗಳೆಲ್ಲಾ ಭಾಗ್ಯಳ ತಲೆಯಲ್ಲಿ ಅನೇಕ ಸಮಸ್ಯೆಗಳನ್ನು ಕೆರಳುತ್ತಿದ್ದವು. ತನ್ನ ತಾಯಿಯ ದುಃಖ, ಆಕೆಯ ನೆರವಿಗೆ ಒಬ್ಬರು ಬೇಕಾದುದು ಅಗತ್ಯ ಎಂಬುದು ಅವಳ ಕಣ್ಣ ಮುಂದೆ ನಿಂತವು. ರಾಮುವಿನ ನೀಚಕೃತ್ಯ ಅವಳಲ್ಲಿ ಅಸಾಧ್ಯ ಅಸಹ್ಯತೆಯನ್ನುಂಟು ಮಾಡಿತ್ತು. ಅವಳಿಗೂ ಅಂದಿನ ರಾತ್ರಿ ನಿದ್ರೆಬರಲಿಲ್ಲ. ತನ್ನ ಭವಿಷ್ಯವನ್ನೇ ಚಿಂತಿಸುತ್ತಾ ಮಲಗಿದಳು. ಹೇಗೋ ಕಷ್ಟಪಟ್ಟು ತನಗೆ ತನ್ನ ತಾಯಿ ಮದುವೆ ಮಾಡುತ್ತಾಳೆ. ಹಾಗೂ ಹೀಗೂ ಕಾಲಕಳೆದ ಮೇಲೆ ನಿಷೇಕವೂ ಆಗುತ್ತದೆ. ಕೊನೆಗೆ ತನ್ನ ತಾಯಿಯನ್ನು ಅಗಲಬೇಕಾಗುವುದು. ಆಗ ತನ್ನ ತಾಯಿ ಅವಳನ್ನು ಮನೆಯಿಂದ ಕಳಿಸುವುದೂ ...' ಈ ವಿಚಾರಗಳೆಲ್ಲಾ ಬಂದು ನಿಲ್ಲಲು ಅವಳ ಮನಸ್ಸಿನಲ್ಲಿ ಕತ್ತಲು ಕವಿಯಿತು. 'ಇಲ್ಲಾ—ಇಲ್ಲಾ ಖಂಡಿತವಾಗಿಯೂ ನಾನು ಮದುವೆ ಮಾಡಿಕೊಳ್ಳುವುದಿಲ್ಲಾ ........ ನನ್ನ ತಾಯಿಯನ್ನು ಬಿಟ್ಟು ಹೋಗುವುದಿಲ್ಲ' ವೆಂದು ನಿರ್ಧಾರಮಾಡಿದಳು.

ಪಾರ್ವತಮ್ಮನವರಿಗಂತೂ ರಾತ್ರಿಯೆಲ್ಲಾ ನಿದ್ರೆಬರಲಿಲ್ಲ. ಅವರೂ ಬಹಳ ಹೊತ್ತು ಯೋಚಿಸುತ್ತಾ ಕಾಲಕಳೆದರು. ಸೀತೆ ಹೊರಡುವುದಂತೂ ಸತ್ಯವಾಗಿತ್ತು. ರಾಮುವೇನೂ ಸಧ್ಯದಲ್ಲಿಯೇ ಇವರನ್ನು ಕೂಡಿ

ಕೊಳ್ಳುವ ಹಾಗೆ ಇರಲಿಲ್ಲ. ಇನ್ನೂ ಅವರ ಒಂದು ಆಸೆ ಭಾಗ್ಯಳ ಮೇಲೆ ಬಿದ್ದಿತ್ತು. ಭಾಗ್ಯ....ಅವಳದೇ ಒಂದು ಸ್ವಭಾವ. ಯಾರಿಗೂ ತಾವು ಹೆದರ ಬಾರದೆಂಬುದೇ ಅವಳ ಮನೋಧರ್ಮವಾಗಿತ್ತು.

## ಏಳು

ಸೀತಾಲಕ್ಷ್ಮಿಯು ಹೋದಮೇಲೆ ಮನೆಗೆಲ್ಲಾ ಪಾರ್ವತಮ್ಮನವರೂ ಭಾಗ್ಯ ಇಬ್ಬರೇ ಆದರು. ಸೀತಾಲಕ್ಷ್ಮಿ ಇದ್ದಾಗ ಪಾರ್ವತಮ್ಮನವರಿಗೆ ಹೆಚ್ಚು ಕೆಲಸವಿರಲಿಲ್ಲ ಅವಳು ಮನೆಗೆಲಸಕ್ಕೆ ಸಹಾಯಕಳಾಗಿ ಅವರಿಗೆ ಅನುಕೂಲ ಮಾಡಿಕೊಡುತ್ತಿದ್ದಳು. ಭಾಗ್ಯ ಅಲ್ಲಿ ಇಲ್ಲಿ ನಿಂತೋ ಅಥವಾ ಕೆಲಸವಮಾಡಿದರೆ ಅವಸರ ಅವಸರದಲ್ಲಿಯೇ ಮುಗಿಸಿ ಬಿಡುತ್ತಿದ್ದಳು. ಭಾಗ್ಯಳಲ್ಲಿ ಸುಶೀಲಳ ನಿಧಾನತೆ ಇರಲಿಲ್ಲ.

ಸೀತಾಲಕ್ಷ್ಮಿಯಗಲಿದ ಮೇಲೆ ಕೆಲಸದ ಭಾರ ಭಾಗ್ಯಳ ಮೇಲೆ ಸ್ವಲ್ಪ ಬಿದ್ದಿತು. ಭಾಗ್ಯ ಅವೊಂದನ್ನೂ ತಲೆಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಹಾಗೂ ಹೀಗೂ ಮಾಡಿ ಅವಸರದಲ್ಲಿ ಮುಗಿಸಿ ಬಿಡುತ್ತಿದ್ದಳು. ಪಾರ್ವತಮ್ಮ ಹೊರಗಾದ ಮೂರು ದಿನಗಳಲ್ಲಿ ಭಾಗ್ಯಳ ಪ್ರಭಾವದಿಂದ ಮನೆ ಕಸದ ಕೋಣೆಯಾಗುತ್ತಿತ್ತು.

ತನ್ನ ವಿಚಾರವನ್ನು ಇತರರ ಮುಂದೆ ಆಡಿಕೊಳ್ಳುವುದನ್ನು ಭಾಗ್ಯ ದ್ವೇಷಿಸುತ್ತಿದ್ದಳು. ಸೀತಾಲಕ್ಷ್ಮಿಗೆ ಕಾಹಿಲೆ ಬಂದಾಗಲಂತೂ ಮನೆಯವ ರನ್ನೆಲ್ಲಾ ಗೋಳಾಡಿಸುತ್ತಿದ್ದಳು. ಆದರೆ ಭಾಗ್ಯ ಹಾಗಿಲ್ಲ. ಕಾಹಿಲೆ ಬಂದಾಗ ಯಾರಿಗೂ ಹೇಳುತ್ತಿರಲಿಲ್ಲ. ಸೀತಾ ಹೋದಮೇಲೆ ಭಾಗ್ಯಳ ಮೇಲಿದ್ದ ಪ್ರೇಮವನ್ನು ಪಾರ್ವತಮ್ಮ ಇಮ್ಮಡಿಸಿದರು. ಈಚೀಚೆಗಂತೂ ಜೀವನವನ್ನು ಸಾಗಿಸುತ್ತಿದ್ದುದು ಭವಿಷ್ಯತ್ತಿನ ಹೆದರಿಕೆಯಿಂದ. ಅಂತಹುದರಲ್ಲಿಯೂ ಕೂಡ, ಯಾವಾಗಲೂ ಚಿರನಗೆಯಿಂದಿರುತ್ತಿದ್ದ ಭಾಗ್ಯ ಅವರಿಗೆ ಪ್ರೋತ್ಸಾಹದಾಯಕ ಳಾಗಿದ್ದಳು.

ದಿನ ಕಳೆದಂತೆಲ್ಲಾ ಪಾರ್ವತಮ್ಮನವರ ಮೈಮೇಲಿದ್ದ ಒಡವೆಗಳು ಮಾಯವಾದವು. ಈಚೆಗೆ ಗದ್ದೆಯಿಂದ ಅಂತಹ ಬೆಳೆಯನ್ನು ನಿರೀಕ್ಷಿಸುವ ಹಾಗಿರಲಿಲ್ಲ. ಎಂತಲೇ ಅವರಿಗೆ ಸಂಸಾರ ನಡೆಸುವುದು ದುಸ್ತರವಾಗಿ ಕಾಣ ಬಂದಿತು. ಅದೊಂದು ಕಡೆ ಅವರಿಗೆ ಭಯವನ್ನುಂಟು ಮಾಡುತ್ತಿತ್ತು.

ರಾಮುವಿನಿಂದ ಅವರಿಗೇನೂ ಸಹಾಯ ದೊರೆಯುತ್ತಿರಲಿಲ್ಲ. ಅವನ ಅಸಾಧ್ಯ ಹಾವಳಿಯನ್ನು, ಸುಶೀಲಾ ಆಗಾಗ್ಗೆ ರಾಮುವಿಗೆ ಕಾಣದಂತೆ ಬಂದು ಹೇಳುತ್ತಿದ್ದಳು.

'ಅಯ್ಯೋ ಅತ್ತೆ! ರಾತ್ರಿಹೊತ್ತು ಮನೆಗೇ ಸೇರುವುದಿಲ್ಲ. ಯಾವಳೋ ಚಂದ್ರಾನಂತೆ. ಅವಳ ಮನೆಯಲ್ಲಿಯೇ ಇರುತ್ತಾರಂತೆ' ಎಂದು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

ರಾಮುವಿನ ದುರ್ಮಾರ್ಗ ನಡತೆಗಳನ್ನು ನೆನಸಿಕೊಂಡಂತೆಲ್ಲಾ ಪಾರ್ವತಮ್ಮನವರ ಉದ್ವೇಗ ಹೆಚ್ಚುತ್ತಿತ್ತು. ರಾಮು, ಅನಂತೂ ಕೆಟ್ಟ ದಾರಿಯಲ್ಲಿ ನಡೆದು ಹಾಳಾಗುವುದನ್ನು ನೋಡಿ ಅವರ ಮನಸ್ಸು ಬಹಳವಾಗಿ ಮಿಡಿಯುತ್ತಿತ್ತು. ಈ ವಿಚಾರದಲ್ಲಿ ರಾಮುವನ್ನು ಪ್ರಶ್ನಿಸುವ ಹಾಗೆಯೇ ಇರಲಿಲ್ಲ. ಆದುದರಿಂದ ಅನಂತಯ್ಯನಿಂದ ನಿಜಾಂಶವನ್ನು ತಿಳಿಯಲು ಮನಸ್ಸು ಮಾಡಿದರು.

ಅಂದು ಅನಂತು ಮನೆಗೆ ಬಂದಾಗ 'ಅನಂತೂ ಒಂದು ವಿಷಯ ನಿನ್ನಲ್ಲಿ ಕೇಳಿಕೊಳ್ಳುತ್ತೇನೆ. ಅಕ್ಕನಲ್ಲಿ ಮರೆಮಾಚಬಾರದು.' ಎಂದು ಕೇಳಿದರು.

'ಏನು ಪಾತಿ ಸಮಾಚಾರ.'

'ಏನೂ ಇಲ್ಲ. ನೀನು ಕೋಪ ಮಾಡಿಕೊಳ್ಳಬಾರದು .. ರಾಮು ಕೆಟ್ಟ ಸಹವಾಸಕ್ಕೆ ಇಳಿದಿದ್ದಾನೆಯೇ? ಅದನ್ನು ನಿನ್ನಿಂದಲೇ ಅಭ್ಯಾಸಿಸಿದ್ದು ಅಂತಾರೆ; ನಿಜವೇ....ನಿಜ ಮಾತ್ರ ಹೇಳು. ಸುಳ್ಳು ಹೇಳಬೇಡ.'

'ಏನೋಮ್ಮ ನನಗೆ ಅದೆಲ್ಲಾ ಗೊತ್ತಿಲ್ಲ. ಮಿಲ್ಲಿನ ವಿಷಯ ಬಿಟ್ಟು ಬೇರೆ ಏನೂ ನನ್ನ ಹತ್ತಿರ ಸಂಬಂಧವೇ ಇಲ್ಲ.'

'ನಿಜವಾಗಿ ಹೇಳು ಅನಂತೂ....ನನ್ನಾಣೆ .......ಕೇಳಿಕೊಳ್ಳುತ್ತೇನೆ ಸತ್ಯವನ್ನು ಹೇಳು.'

'ನಿಜವಾಗಿಯೂ ನನಗೆ ಗೊತ್ತಿಲ್ಲ ಪಾತಿ.'

'ಸುಳ್ಳು ಹೇಳ ಬೇಡ ಅನಂತೂ ...ನನಗೂ ಎಲ್ಲಾ ಗೊತ್ತು ನೋಡು. ಅನಂತೂ....ನೀನು ಒಪ್ಪಿಕೊಳ್ಳದಿದ್ದರೂ ನನಗೆ ಎಲ್ಲಾ ತಿಳಿದಿದೆ. ದಯವಿಟ್ಟು ನಿನ್ನನ್ನು ಕೇಳಿಕೊಳ್ಳುತ್ತೇನೆ. ನೀನು ಪ್ರಯತ್ನಪಟ್ಟರೆ ಕುಸಿದು ಬೀಳುತ್ತಿರುವ ಸಂಸಾರವನ್ನು ಹಿಡಿದು ನಿಲ್ಲಿಸಬಹುದು. ಸುಶೀಲಳ ಕಷ್ಟ ನಿನಗೇನು ಗೊತ್ತು.

ಗಂಡನೊಡನೆ ನಲಿದಾಡುವ ಕಾಲದಲ್ಲಿ ದಾರುಣವಾದ ಕಷ್ಟ ವ್ಯಥೆಗಳನ್ನನು ಭವಿಸಬೇಕಾಗಿದೆ.. ನೀನು ಪ್ರಯತ್ನಮಾಡಿ ಹಾಳು ನೀಚ ಸಹವಾಸದಿಂದ ದೂರವಿರುವ ಹಾಗೆ ಮಾಡಬೇಕಾಗಿದೆ.'

'ನಾನು ಏನು ಮಾಡೋಕ್ಕೆ ಆಗುತ್ತೆ.'

'ಎಲ್ಲವೂ ನಿನ್ನಿಂದಲೇ ಸಾಧ್ಯ ಅಂದೆನಲ್ಲ. ನೀನು ಮೊದಲು ಹಾಳು ಸಹವಾಸದಿಂದ ಪಾರಾಗು. ಅನಂತರ ಅವನನ್ನು ದುರ್ಮಾರ್ಗದಿಂದ ಸರಿಯಾದ ಹಾದಿಗೆ ತರುವುದು ಕಷ್ಟವಾಗುವುದಿಲ್ಲ.'

'ಏನು ಪಾತಿ, ಏನೇನೋ ನುಡಿಯುತ್ತಿರುವೆಯಲ್ಲಾ.'

'ಏನೂ ಇಲ್ಲಪ್ಪಾ. ನಿನ್ನ ಅಕ್ಕ ಎಂತ ಅಷ್ಟೊಂದು ಸಲಿಗೆ ತೆಗೆದು ಕೊಂಡು ಹೇಳಿದೆ ಕೋಪ ಮಾಡಿಕೊಳ್ಳಬೇಡ. ನಿಧಾನವಾಗಿ ಯೋಚಿಸಿ, ರೆಕ್ಕೆ ಮುರಿದು ಬಿದ್ದ ಸುಶೀಲಳ ಸಂಸಾರವನ್ನು ಪುಕ್ಕ ಗೂಡಿಸಿ ಹಾರಿಸಿ ನಲಿಸುವಹಾಗೆ ಮಾಡಬೇಕಾದ್ದು ನಿನ್ನ ಕರ್ತವ್ಯ.'

ಅನಂತಯ್ಯನು ಇನ್ನು ಹೆಚ್ಚು ಮಾತನಾಡಿದರೆ ತನ್ನ ಬಂಡವಾಳವೆಲ್ಲಾ ಬರಿದಾಗುವುದೆಂದು ಬಗೆದು 'ಆಗಲಿ ಪಾತಿ ನೀನು ಹೇಳಿದ್ದು ಯೋಚಿಸುತ್ತೇನೆ.. ....ಅರೆ....ಅರೆ....ಮರತೇ ಬಿಟ್ಟೆನಲ್ಲಾ; ಯಾರನ್ನೋ ನೋಡಬೇಕಾಗಿದೆ; ಪಾತಿ, ಹೋಗುತ್ತೇನೆ.' ಎಂದು ಹೇಳಿ ಹೊರಡಲನುವಾದ.

ಅವನು ಹೋಗುವುದಕ್ಕೆ ಮುಂಚೆ ಇನ್ನೊಂದು ಸಾರಿ 'ಅನಂತೂ ನಿಮ್ಮಕ್ಕಾ ನಾನು ಕೇಳಿಕೊಳ್ಳುತ್ತೇನೆ...... ನೀನು ಹೇಳಿದ ಕೆಲಸ ಏನು ಬೇಕಾದರೂ ಮಾಡುತ್ತೇನೆ. ದಯುವಿಟ್ಟು ರಾಮುವಿಗೆ ಈ ಕೆಟ್ಟ ಸಹವಾಸವನ್ನು ತಪ್ಪಿಸು.' ಎಂದು ಬೇಡಿಕೊಂಡರು.

ಅನಂತಯ್ಯನು ಅಕ್ಕನ ಮನೆಗೆ ಇನ್ನೊಂದು ಸಾರಿ ಕಾಲಿಡಬಾರದೆಂದು ಸಂಕಲ್ಪಿಸಿಕೊಂಡೇ ಹೊರಟನು.

ಅವನಿಂದ ಈ ವಿಷಯ ಬಗೆ ಹರಿಯುವುದಿಲ್ಲವೆಂಬುದನ್ನು ಅರಿಯಲು ಪಾರ್ವತಮ್ಮನವರಿಗೆ ಬಹಳ ದಿನಗಳು ಬೇಕಾಗಲಿಲ್ಲ.

ಸುಶೀಲಳ ಜೀವನವೇ ಒಂದು ಸಮಸ್ಯೆಯಾಗಿತ್ತು. ಅವಳೇನಾದರೂ ಗಂಡನ ಕೆಟ್ಟ ಬಾಳಿಗೆ ವಿರುದ್ಧವಾಗಿ ನಿಂತರೆ, ಅವನಿಂದ ಪ್ರಹಾರಗಳನ್ನು ಎಡೆಬಿಡದೆ ಅನುಭವಿಸ ಬೇಕಾಗಿದ್ದಿತು. ಮನೆ ರಾಮುವಿನ ಕೂಗಾಟದ

ಬೇಡಾಗಿತ್ತು. ಮೊದಮೊದಲು ಪ್ರತಿಭಟಿಸಿ, ತನ್ನ ಹಕ್ಕನ್ನು ಸಂಪಾದಿಸಿಕೊಳ್ಳಲು ವಾದಿಸುತ್ತಿದ್ದಳು. ಆದರೆ ಅವನ ಪ್ರಹಾರದ ವೇದನೆ ತಾಳಲಾರದೆ ಅವನು ಏನು ಮಾಡಿದರೂ ಸುಮ್ಮನಿರ ಹತ್ತಿದಳು. ರಾತ್ರಿಯ ವೇಳೆ ರಾಮುವಿನ ಆಗಮನವನ್ನೇ ಕಾಯುತ್ತಾ ಬೇಸತ್ತು ಮಲಗುತ್ತಿದ್ದಳು. ಎಷ್ಟೋದಿನ ಸಾಯಂಕಾಲ ಮನೆ ಬಿಟ್ಟವನು ಮಾರನೆಯ ದಿನವೇ ಬರುತ್ತಿದ್ದನು. ಯಾವಾಗಲೂ ಅವನ ಜೊತೆ ಅನಂತಯ್ಯನು ಕೂಡಿಯೇ ಇರುತ್ತಿದ್ದನು.

ಪಾರ್ವತಮ್ಮನವರ ಮನೆಯಿಂದ ಬಂದ ಮೇಲೆ ಅನಂತಯ್ಯನ ಮನಸ್ಸು ಕೆಣಕಿತ್ತು. ರಾಮಪ್ಪನನ್ನು ಕಂಡ ಕೂಡಲೇ ‘ ಏನಯ್ಯಾ ನಿನ್ನ ಜೊತೆ ತಿರುಗುವುದರಿಂದಲೇ ನಾನು ಕೆಟ್ಟ ಹೆಸರು ಪಡೆಯಬೇಕಾಯಿತಲ್ಲಾ ’ ಎಂದನು.

‘ ಏನು ಹಾಗೆಂದರೆ ’ ಎಂದ ರಾಮಪ್ಪ.

‘ಹಾಗಂದರೆ, ನಾನು ನಿನ್ನನ್ನು ದುರ್ಮಾರ್ಗಕ್ಕೆ ಎಳೆದೆನೆಂದು ಅರ್ಥ.’

‘ ಯಾರು ಹಾಗೆಂದವರು ? ’

‘ ಯಾರೂ ಇಲ್ಲ ; ನಿನ್ನ ಚಿಕ್ಕಮ್ಮನೇ. ’

‘ ಯಾವ ರಂಡೇ ತಿಳಿಸಿದಳೋ ಅವಳಿಗೆ ಇವೆಲ್ಲಾ ? ’

‘ ಇನ್ಯಾರಯ್ಯಾ ನಿನ್ನ ಹೆಂಡತೀನೇ ಇರಬೇಕು. ’ ಎಂದು ರಾಮುವನ್ನು ಮತ್ತಷ್ಟು ಕೆಣಕಿದ.

ಆ ರಾತ್ರಿ ರಾಮಪ್ಪನು ಬೇಗನೆ ಮನೆಗೆ ಬಂದ. ಬಂದ ಕೂಡಲೇ ‘ ಸುಶೀಲಾ.... ಇಲ್ಲಿ ಬಾರೆ. ನಿಮ್ಮತ್ತೆ ಮನೆಗೆ ಯಾಕೆ ನೀನು ಹೋಗಿದ್ದು ? ’ ಎಂದು ಗುಡುಗಾಡಿದ.

ಇಂದು ಏಟು ತಿನ್ನುವುದು ಖಂಡಿತವೆಂದು ಸುಶೀಲಳಿಗೆ ಕೂಡಲೇ ಹೊಳೆಯಿತು. ಅದನ್ನು ತಪ್ಪಿಸಿಕೊಳ್ಳಲು ‘ ನಾನು ಹೋಗಲೇ ಇಲ್ಲವಲ್ಲಾ....’ ಎಂದಳು.

‘ ಸಾಕೇ... ಕತ್ತೆರಂಡೇನ ತಂದು.... ಹೋಗಿದ್ದು ಅಲ್ಲದೆ, ಏನೇನೋ ಬಗುಳಿ ಬಂದದ್ದು ’ ಎಂದು ಛಳೀರೆಂದು ಕೆನ್ನೆಗೆ ಕೊಟ್ಟ.

ಸುಶೀಲಳಲ್ಲಿ ಸ್ವತಂತ್ರ ಮನೋಭಾವ ಮೊದಲಿನಿಂದಲೂ ಬೆಳೆದು ಬಂದಿತ್ತು. ಕೆಣಕಿದ ಕೂಡಲೇ ಅವಳು ಸಿಂಹಿಣಿಯಂತಾಗುತ್ತಿದ್ದಳು. ರಾಮು ಕೆನ್ನೆಗೆ ಏಟು ಕೊಡುತ್ತಲೇ ಅವಳ ಕಣ್ಣುಗಳಲ್ಲಿ ಬಿಂದುಗಳು ಮೂಡಿದವು.

ಕಣ್ಣುಗಳೆರಡೂ ಕೆಂಪೇರಿದವು. ಅವನ ಮುಂದೆಯೇ ಹಲ್ಲು ಕಚ್ಚುತ್ತಾ 'ಹೌದೌದು ನೀವು ಕೆಟ್ಟ ಕೆಲಸ ಮಾಡೋದೇ ಉಂಟಂತೆ....ನಾನು ಹೇಳಿದರೆ ಏನು ತಪ್ಪೋ' ಎಂದು ಧೈರ್ಯದಿಂದ ನುಡಿದಳು.

ರಾಮುವಿನ ಬುದ್ಧಿಯಾಗಲೇ ಹದಮೀರಿ ಹೋಗಿತ್ತು. 'ಹೇಳಿದರೇನು ತಪ್ಪೇ' ಎಂದು ಉಚ್ಚರಿಸುತ್ತಾ ಮೂಲೆಯಲ್ಲಿದ್ದ ಚಿಕ್ಕ ಬೆತ್ತವನ್ನು ತೆಗೆದು ಕೊಂಡು ಹುಚ್ಚನಂತೆ ರೊಪರೊಪನೆ ಸುಶೀಲಳನ್ನು ಥಳಿಸಿದನು. ಏಟುಗಳನ್ನು ತಡೆಯಲಾರದೆ 'ಅಯ್ಯೋ ಸತ್ತೆನಪ್ಪಾ....ಬಿಡಿಸೋರೇ ಯಾರೂ ಇಲ್ಲವೇ....' ಎಂದು ಗಟ್ಟಿಯಾಗಿ ಕಿರುಚುತ್ತಾ ಆಕೆ ನೆಲದಮೇಲೆ ಬಿದ್ದು ಬಿಟ್ಟಳು. ಆರ್ತ ಧ್ವನಿ ಕೇಳಿ ಅಕ್ಕಪಕ್ಕದವರು ಓಡಿಬಂದು, ಅವಳನ್ನು ರಾಮುವಿನಿಂದ ದೂರ ಮಾಡಿದರು. 'ಏನ್ರಿ, ರಾಮಪ್ಪನರೇ ಇಷ್ಟು ವಯಸ್ಸಾಗಿದೆ. ಕಂಡೋರ ಹೆಣ್ಣನ್ನು ಹೊಡೆಯಲು ನಿಮಗೇನ್ರೀ ಬಂದಿದೆ.' ಎಂದು ಎಲ್ಲರೂ ಛೀಕಾರ ಮಾಡಿ ಹೋದರು.

ಅವಾದನಂತರ ಮನೆಬಿಟ್ಟವನು ಎರಡುದಿನ ಮನೆಯ ಕಡೆ ಬರಲೇ ಇಲ್ಲ

‡ ‡ ‡ ‡

ಅತ್ತ ಮಿಲ್ಲಿನ ವಿಚಾರ ತೆಗೆದುಕೊಂಡರೋ ; ಯಜಮಾನರ್‍ಯಾರೆಂಬುದೇ ಗೊತ್ತಾಗುತ್ತಿರಲಿಲ್ಲ. ಅನಂತಯ್ಯ ಜೋರು ಮಾಡುವುದು. ಶಾಂತಯ್ಯ ಮಿಲ್ಲು ತನ್ನದೆಂಬಂತೆಯೇ ಅಧಿಕಾರ ನಡೆಸುತ್ತಿದ್ದ. ರಾಮು ಮಾತ್ರ ನೆಪಕ್ಕೆ ಲೆಖ್ಖ ವನ್ನು ನೋಡಿ ಚಂದ್ರಳ ಮನೆಯಲ್ಲಿ ಕಾಲ ಕಳೆಯುತ್ತಿದ್ದ. ಹೀಗಾಗಿ ಮಿಲ್ಲಿನ ಲೆಖ್ಖಾಚಾರವೆಲ್ಲಾ ಶಾಂತಯ್ಯನ ಕೈಯಲ್ಲೇ ಉಳಿಯಿತು.

‡ ‡ ‡ ‡

ಏಟು ತಿಂದ ಸುಶೀಲ ತನ್ನ ವಿಚಾರವನ್ನೇ ಬಹಳವಾಗಿ ಯೋಚಿಸಿದಳು. ತನ್ನ ಗಂಡ ಹೊಡೆದದ್ದು, ಅದಕ್ಕಿಂತ ಹೆಚ್ಚಾಗಿ ನೆರೆಯವರಿಗೆ ಈ ವಿಚಾರ ತಿಳಿದದ್ದು ಅವಳ ಮನಸ್ಸನ್ನು ಬಹಳ ಹಿಂಸೆಗೊಳಿಸಿದವು. ಗಂಡನನ್ನು ಒಳ್ಳೆಯ ದಾರಿಗೆ ತರಲು ಯಾವ ಮಾರ್ಗವೂ ಅವಳಿಗೆ ಹೊಳೆಯಲಿಲ್ಲ. ಯಾವ ರೀತಿಯಲ್ಲಾದರೂ, ತ್ಯಾಗ ಮಾಡಲು ಅವಕಾಶವೇ ಇರಲಿಲ್ಲ. ಹೀಗೆಯೇ ಯೋಚಿಸುತ್ತಾ ಇದ್ದ ಸುಶೀಲಳಿಗೆ ತನ್ನ ಅತ್ತೆಯ ಜ್ಞಾಪಕವಾಯಿತು. ಅತ್ತೆಯ ಮನೆಗೆ ಹೋದುದಕ್ಕೆ ಏಟುಬಿತ್ತು. ಪುನಃ ಹೋಗುವುದು ಅಷ್ಟು

ಸುಗಮವಾಗಿ ಕಾಣಲಿಲ್ಲ. ಆದರೆ ಅವಳ ಹೃದಯಕ್ಕೆ ಅವಳ ಅತ್ತೆಯ ಸಾಮೀಪ್ಯ ಬೇಕಾಗಿದ್ದಿತು. ಅವಳತ್ತೆಯ ನೆರವು ಎಂಥ ಶಾಂತಿ! ಎಲ್ಲಾ ನೋವುಗಳನ್ನೂ ಮರೆಸುವಂತಹ ಮಗುವಿನಂಥ ಮನಸ್ಸು ಅವರದು. ಬೆಳಗಾದ ಕೂಡಲೇ ಅತ್ತೆಯ ಮನೆಗೆ ಹೋಗಬೇಕೆಂದು ನಿರ್ಧರಿಸಿದಳು. ಆದರೆ ಕತ್ತಲಲ್ಲೇ ಅವರ ಮನೆಗೆ ಹೋಗುವುದು ಒಳ್ಳೆಯದೆಂದು ಯೋಚಿಸಿ, ಮರುದಿನ ಸಂಜೆಯಾಗುತ್ತಲೇ ಮಗುವನ್ನೆತ್ತಿಕೊಂಡು ಅತ್ತೆಯ ಮನೆಗೆ ಹೋದಳು.

ಪಾರ್ವತಮ್ಮನವರನ್ನು ಕಂಡ ಕೂಡಲೇ ಸುಶೀಲಾ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದಳು. ಏನೋ ಅಪಘಾತವಾಗಿರಬಹುದೆಂದು ಯೋಚಿಸಿ, 'ಬಾ ಸುಶೀಲಾ' ಎಂದು ಅವಳ ಕೈ ಹಿಡಿದು ಹತ್ತಿರ ಕುಳ್ಳಿರಿಸಿಕೊಂಡರು.

'ಏನು ಹೇಳಲಿ ನಿಮಗೆ .......ನಿನ್ನೆ ನಾನು ಎದ್ದ ಹೊತ್ತು ಕೆಟ್ಟದಿರಬೇಕು........'

'ಯಾಕೆ ಸುಶೀಲಾ .......ರಾಮು ಏನಾದರೂ ರೇಗಾಡಿದನೇ ?'

'ಬರೀ ಕೂಗಾಡಿದ್ದರೆ ನನಗೇನೂ ಸಂಕಟವಾಗುತ್ತಿರಲಿಲ್ಲ.....ಆ ಏಟುಗಳನ್ನು ತಿನ್ನುವುದಕ್ಕೆ ಮಾತ್ರ ನನಗೆ ಸಾಧ್ಯವಿಲ್ಲ ಅತ್ತೇ........' ಎಂದು ಹೇಳುತ್ತಾ, ತನ್ನ ಮೈ ಮೇಲೆದ್ದಿದ್ದ ಬರೆಗಳನ್ನು ಬಿಕ್ಕಿ ಬಿಕ್ಕಿ ಅಳುತ್ತಾ ತೋರಿಸಿದಳು.

'ಅಯ್ಯೋ! ನನ್ನ ಕಂದ ಎಂಥ ಏಟುಗಳೇ ಇವು. ಸುಶೀಲಳನ್ನು ಹೊಡೆಯುವ ಹಾಗೆ ಯಾಕೆ ಮನಸ್ಸು ಕೊಟ್ಟೆಯಪ್ಪಾ ...' ಎಂದು ಮೆಲ್ಲನೆ ಉಸುರ್ಗರೆದರು.

'ಅತ್ತೇ ನಾನು ನಿಮ್ಮ ಹತ್ತಿರ ಬಂದು ಅವರು ದುರ್ಮಾರ್ಗಕ್ಕೆ ಇಳಿದಿದ್ದಾರೆಂದು ಹೇಳಿದೆನಂತೆ....ಅದಕ್ಕೆ ನಾನು ಅನುಭವಿಸಬೇಕಾದ ಶಿಕ್ಷೆ....'

ಪಾರ್ವತಮ್ಮನವರಿಗೆ ಬೇಗನೆ ವಿದ್ಯಮಾನವೆಲ್ಲವೂ ಗೋಚರವಾಯಿತು. ತಾವು ಅನಂತಯ್ಯನನ್ನು ಪ್ರಾರ್ಥಿಸಿಕೊಂಡದ್ದೇ ಇದಕ್ಕೆ ಮೂಲವೆಂದು ಹೊಳೆಯಿತು.

'ಅಯ್ಯೋ ನನ್ನ ಕಂದ........ಕೈಯಾರ ನಾನೇ ಹೊಡಿಸಿದನಲ್ಲೇ.... ದೇವರೇ! ನನ್ನನ್ನು ಹೊಡೆಸಬಾರದಾಗಿತ್ತೇ....ಚಿನ್ನದಂತಹ ಸುಶೀಲಳಿಗೆ ಈ ಕಷ್ಟವೇ.' ಎಂದು ಕಣ್ಣೀರು ಸುರಿಸಿದರು. ಸುಶೀಲಳ ಮೇಲಿದ್ದ ಘಾಯ ಗಳನ್ನು ಸವರಿ 'ನನ್ನ ಕಂದ, ನನ್ನಿಂದ ನಿನಗೆ ಈ ತೊಂದರೆಗಳು ಬಂದವಲ್ಲಾ ಪರಮಾತ್ಮ ನನಗೆ ಏನು ಶಿಕ್ಷೆ ಕೊಟ್ಟರೂ ಸಾಲದು' ಎಂದು ದುಃಖಿಸಿದರು.

ಇದನ್ನೆಲ್ಲಾ ನೋಡುತ್ತಿದ್ದ ಭಾಗ್ಯಳಲ್ಲಿ ಅಸಾಧ್ಯವಾದ ಪರಿಣಾಮ ಗಳುಂಟಾದವು. ರಾಮುವನ್ನು ಕಂಡರೆ ಅವಳಿಗೆ ಮೈ ಉರಿಯಹತ್ತಿತು. ಆದರೆ ತಾನು ಅವನ ವಿಚಾರದಲ್ಲಿ ಇಟ್ಟಿದ್ದ ಅಭಿಪ್ರಾಯವನ್ನು ತನ್ನ ತಾಯಿಗೆ ಮಾತ್ರ ತಿಳಿಸಲಿಲ್ಲ.

ಸುಶೀಲಾ ಮತ್ತು ಪಾರ್ವತಮ್ಮನವರು ಬಹಳ ಹೊತ್ತು ಕಣ್ಣೀರು ಸುರಿಸುವುದರಲ್ಲಿಯೇ ಕಾಲ ಕಳೆದರು. ಕೊನೆಗೆ ಬಹಳ ಕತ್ತಲಾಗುತ್ತಾ ಬಂದುದರಿಂದ ಪಾರ್ವತಮ್ಮನವರು ಸುಶೀಲಳನ್ನು ಸಮಾಧಾನ ಪಡಿಸಿ ಮನೆಗೆ ಕಳುಹಿಸಿದರು.

## ಎಂಟು

ಸೀತಾಲಕ್ಷ್ಮಿ ತನ್ನ ತಾಯಿಗೆ ಈಸಲ ಕಾಗದ ಬರೆದಾಗ ತನಗೆ ಐದು ತಿಂಗಳು ತುಂಬಿದೆ ಎನ್ನುವ ಸಮಾಚಾರವನ್ನು ತಿಳಿಸಿದ್ದಳು. ಪಾರ್ವತಮ್ಮ ನವರ ಖರ್ಚಿನ ತಾಪತ್ರಯಗಳೂ ಹೆಚ್ಚಾದವು ಮಗಳನ್ನು ಬಾಣಂತನಕ್ಕೆ ಕರೆಯುವ ಹಾಗೂ ಇರಲಿಲ್ಲ....ಬಿಡುವ ಹಾಗೂ ಇರಲಿಲ್ಲ. ಕೊನೆಗೆ ಏಳ ನೆಯ ತಿಂಗಳಿನಲ್ಲಿ ಅವಳನ್ನು ಮನೆಗೆ ಕರೆಸಿಕೊಂಡರು. ಅವಳನ್ನು ಅಗಲಿ ಅಗಲೇ ಬಹಳ ದಿನಗಳಾಗುತ್ತ ಬಂದಿದ್ದವು. ಈ–ಒಂದೂವರೆ–ವರ್ಷದಲ್ಲಿ ಸೀತಾಲಕ್ಷ್ಮಿ ಯಾರದ್ದೋ ಮದುವೆಗೆ ಬೆಂಗಳೂರಿಗೆ ಬಂದಿದ್ದಾಗ ಮಾತ್ರ ಪಾರ್ವತಮ್ಮನವರು ಕಂಡಿದ್ದರು. ಹೀಗಾಗಿ ಅವಳನ್ನು ಕರೆಸಿಕೊಳ್ಳಲು ವಿಶೇಷ ಹಂಬಲವುಂಟಾಯಿತು.

ಡಿಗ್ರಿಯನ್ನು ಪಡೆದು ಒಂದು ವರ್ಷವಾಗಿದ್ದರೂ ರಾಜಶೇಖರನಿಗಿನ್ನೂ ಉದ್ಯೋಗ ದೊರೆತಿರಲಿಲ್ಲ. ಅಣ್ಣನ ಮನೆಯಲ್ಲಿ ತಾನೂ ತನ್ನ ಹೆಂಡತಿಯೂ ಅವರಿಗೆ ಭಾರವಾಗಿರುವುದು ಸರಿಯಲ್ಲವೆಂದು ಅವನೇ ತಿಳಿದಿದ್ದ.

ಕೆಲಸಕ್ಕಾಗಿ ಅಲೆದು ಅಲೆದು ರಾಜಶೇಖರನು ಅತ್ತಿ ಕಾಯಾಗಿದ್ದ. ಸ್ವಲ್ಪ ಕಾಸು ಬೇಕಾಗಿದ್ದರೂ ತನ್ನಣ್ಣನ ದಾಕ್ಷಿಣ್ಯಕ್ಕೆ ಒಳಗಾಗ ಬೇಕಾಗಿತ್ತು. ಸೀತಾಲಕ್ಷ್ಮಿಯಂತೂ ಆದಷ್ಟು ಮಟ್ಟಿಗೆ ಗಂಡನನ್ನು ಸಂತೋಷಗೊಳಿಸಲು ಯತ್ನಿಸುತ್ತಿದ್ದಳು. ಅತ್ತಿಗೆಯಿಂದ ಹಿಂಸೆಯನ್ನನುಭವಿಸುತ್ತಿದ್ದರೂ, ಅದನ್ನೊಂದೂ ಹೊರಗೆ ತೋರ್ಪಡಿಸುತ್ತಿರಲಿಲ್ಲ.

ಸೀತಾಲಕ್ಷ್ಮಿಯು ಪಡುತ್ತಿದ್ದ ಕಷ್ಟಗಳೆಲ್ಲವೂ ರಾಜಶೇಖರನಿಗೆ ಗೊತ್ತಾಗಿತ್ತು. ಸದ್ಯ ಎಂಥ ಕೆಲಸ ಸಿಕ್ಕಿದರೂ ಸಾಕೆಂದು ಬಹಳ ತವಕಪಡುತ್ತಿದ್ದ. ಬೆಳಗಾದ ಕೂಡಲೇ ಹತ್ತಿರದಲ್ಲೇ ಇದ್ದ ವಾಚನಾಲಯಕ್ಕೆ ಹೋಗಿ ಪತ್ರಿಕೆಗಳಲ್ಲಿದ್ದ "ಬೇಕು" ಸ್ಥಳಗಳನ್ನೆಲ್ಲಾ ಗುರುತು ಹಾಕಿಕೊಂಡು ಬರುತ್ತಿದ್ದ. ಬಹಳ ಶ್ರಮ ತೆಗೆದುಕೊಂಡು ಪ್ರಯತ್ನಪಟ್ಟರೆ ಈಗ ಸದ್ಯಕ್ಕೆ ಬೇಡ, ಬೇರೆಯವರನ್ನು ತೆಗೆದುಕೊಂಡಾಗಿದೆ ಎಂದು ಉತ್ತರ ಪಡೆಯುತ್ತಿದ್ದನು. ಮನೆಗೆ ಬಂದರೆ ನಂಜಪ್ಪನವರು ಬೇರೆ ಅವನನ್ನು ಬಿಡಿಸಿ ಬಿಡಿಸಿ ಅವನು ಪಟ್ಟ ಪ್ರಯಾಸಗಳನ್ನೆಲ್ಲಾ ಕೇಳುತ್ತಿದ್ದರು- ಅಷ್ಟೇ ಅಲ್ಲದೆ ಅವನನ್ನು ಹೀಗೆ ಮಾಡಬೇಕಾಗಿತ್ತು, ಅವರನ್ನು ಹಾಗೆ ನೋಡಬೇಕಾಗಿತ್ತೆಂಬುದಾಗಿ ಟೀಕಿಸಿ ಇನ್ನೂ ಅವನ ಮನಸ್ಸು ನೋಯಿಸುತ್ತಿದ್ದರು.

ನಂಜಪ್ಪನವರಿಗೂ ರಾಜಶೇಖರನಿಗೂ ಮೂರು ದಿನದಿಂದ ಮನಸ್ತಾಪ. ಅವರು 'ಹೋ ರಾಜಾ ರಾವ್‌ಬಹದ್ದೂರ್ ಸದಾಶಿವರಾಯರನ್ನು ನೋಡಿ, ಯಾವುದಾದರೂ ಕೆಲಸ ಕೊಡಿಸಿ ಎಂದು ಅವರನ್ನು ಕೇಳಿಕೊಳ್ಳೋ. ಅವರು ಐದಾರು ಔದ್ಯೋಗಿಕ ಸಂಸ್ಥೆಗಳ ಡೈರೆಕ್ಟರ್ ಆಗಿದ್ದಾರೆ. ಅದೂ ಅಲ್ಲದೆ ಅವರ ಮಾತು ಅಂದರೆ ಯಾರಾದರೂ ಸ್ವಲ್ಪ ಕೇಳುತ್ತಾರೆ' ಎಂದು ಮೂರು ದಿನದಿಂದಲೂ ಪದೇ ಪದೇ ಹೇಳುತ್ತಿದ್ದರು. ರಾಜಶೇಖರನು ಅದಕ್ಕೆ 'ಅವರೆಲ್ಲಿ ನಮ್ಮ ಕಡೆ ಕಣ್ಣು ತೆಗೆದು ನೋಡುತ್ತಾರೆ....ಸುಮ್ಮನೆ ನೋಡೋದೊಂದೇ ಆಗುತ್ತದೆ. ಅದರಿಂದ ಏನೂ ಫಲ ದೊರೆಯುವುದಿಲ್ಲ' ಎಂದು ಹೇಳುತ್ತಿದ್ದ.

'ಈಗಿನ ಕಾಲದ ಹುಡುಗರೆಲ್ಲಾ ಹೀಗೆ. ದೊಡ್ಡೋರು ಏನು ಹೇಳುತ್ತಾರೆ ಮಾಡಿ ನೋಡೋಣ ಎನ್ನೋದು ಇಲ್ಲವೇ ಇಲ್ಲ' ಎಂದು ನಂಜಪ್ಪನವರು ರಾಜಶೇಖರನ ಮೇಲೆ ಕೋಪಮಾಡಿಕೊಂಡು ಹೋಗುತ್ತಿದ್ದರು.

ಮೂರು ದಿನಗಳಿಂದಲೂ ಈ ತರದ ಸಂಭಾಷಣೆಯನ್ನು ಸೀತಾಲಕ್ಷ್ಮಿ ರಾಜಶೇಖರನ ಬಳಿ ಬಂದು 'ಒಂದು ಮಾತು ಕೇಳುತ್ತೇನೆ. ದಯವಿಟ್ಟು ನಡೆಸಿಕೊಡಬೇಕು' ಎಂದಳು.

' ಏನು ಸೀತಾ '

' ಏನು ಇಲ್ಲಾ. ನಿಮ್ಮಣ್ಣಾ ನಿತ್ಯವೂ ಹೇಳುತ್ತಿದ್ದಾರಲ್ಲ ಒಂದು ಸಲ ಹೋಗಿ ಅದ್ಯಾರೋ ಹೆಸರು ಹೇಳಿದರಲ್ಲಾ ಅವರನ್ನು ನೋಡಿ ಬಂದುಬಿಡಿ ........ '

' ಸೀತಾ ನೀನು ಹುಚ್ಚಿ. ಆಡಿದ ಹಾಗೆ ಆಡುತ್ತೀಯಲ್ಲಾ? ಅವರೆಲ್ಲಾ ನಮಗೆ ಸಹಾಯ ಮಾಡುತ್ತಾರೆಂದು ತಿಳಿದಿದ್ದೀಯಾ. ಖಂಡಿತ ಅವರು ನಮ್ಮ ಕಡೆ ಕೂಡಾ ನೋಡುವುದಿಲ್ಲ....'

ಅದಕ್ಕಲ್ಲಾ ನಾನು ಹೇಳೋದು. ಸುಮ್ಮನಿದ್ದರೆ ನಿಮ್ಮ ಅಣ್ಣನವರು ಮನಸ್ಸಿಗೆ ಹಿಂಸೆ ತಂದುಕೊಳ್ಳುತ್ತಾರೆಂದು ಅಷ್ಟೇ. ಸುಮ್ಮನೆ ಹೋಗಿಬಂದ ಶಾಸ್ತ್ರ ಮಾಡಿಬಿಡಿ.'

' ಆಗಲಿ ಸೀತಾ, ಅವರನ್ನು ನೋಡಿಯೇ ಬರುತ್ತೇನೆ....' ಎಂದು ಹೇಳಿ ಸದಾಶಿವರಾಯರ ಮನೆಗೆ ತೆರಳಿದನು

ಇವನು ಹೋದ ಹೊತ್ತಿಗೆ ಸರಿಯಾಗಿ ಸದಾಶಿವರಾಯರು ತಮ್ಮ ಕಾಂಪೋಂಡಿನಲ್ಲಿಯೇ ತಿರುಗಾಡುತ್ತಿದ್ದರು. ರಾಜಶೇಖರ ಅವರಿಗೆ ನಮಸ್ಕರಿಸಿ ತಾನು ಬಂದ ಕಾರಣವನ್ನು ಹೇಳಿಕೊಂಡನು. ಅವರು ಸ್ವಲ್ಪ ಹೊತ್ತು ಯೋಚಿಸಿ ' ಈಗಿನ ಕಾಲದ ಹುಡುಗರಿಗೆ ಓದು ಪೂರೈಸಿದ ಕೂಡಲೇ ಕೆಲಸ ಬೇಕು. ಯಾರು ತಾನೇ ಕೆಲಸ ಕರೆದು ಕೊಡುತ್ತಾರೆ. ಧೈರ್ಯದಿಂದ ಯಾವುದಾದರೊಂದು ವ್ಯಾಪಾರಾನೋ ಅಥವಾ ಇನ್ನಾವುದಾದರೊಂದು ಕಾರ್ಯಸಾಧನೆಗಾಗಿ ಮುಂದೆ ನುಗ್ಗಲು ಶಕ್ತಿ ಸಂಪಾದಿಸಬೇಕಯ್ಯಾ. ಸುಮ್ಮನೆ ಕೆಲಸ ಕೊಡಿಸಿ ಎಂದರೆ ಎಲ್ಲಿಂದ ತರೋಣ ' ಎಂದರು.

' ಅಲ್ಲಾ ಸಾರ್, ತಾವು ಅನೇಕ ಔದ್ಯೋಗಿಕ ಸಂಸ್ಥೆಗಳಲ್ಲಿ ಸಂಬಂಧವನ್ನು ಇಟ್ಟುಕೊಂಡಿದ್ದೀರಿ; ಅಲ್ಲೇ ಯಾವುದಾದರೊಂದರಲ್ಲಿ ದೊಡ್ಡ ಮನಸ್ಸು ಮಾಡಿ ಒಂದು ಪುಟ್ಟ ನೌಕರಿ ಕೊಡಿಸಿದರೆ....'

ದದಾಶಿವರಾಯರು ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ " ಹಾಗಾದರೆ, ಕನ್ನಡದಲ್ಲಿ ಸ್ವಲ್ಪ ಪರಿಶ್ರಮವಿದೆಯೇ ? ಎಂದು ಕೇಳಿದರು.

'ಕನ್ನಡದಲ್ಲಿ ಮೊದಲನೇ ಕ್ಲಾಸ್ ಬಂದಿದೆ ಸಾರ್....ಅದೂ ಅಲ್ಲದೆ ಕೆಲವು ಕವಿತೆಗಳು ಬರೆದಿದ್ದೇನೆ ಸಾರ್'

'ನಿಮ್ಮಂಥಾವರೆಲ್ಲ ಮುಂದೆ ಬಂದು ಕನ್ನಡ ಭಾಷಾಮಾತೆಯ ಸೇವೆ ಕೈಕೊಳ್ಳಬೇಕು. ನೋಡು ಕನ್ನಡ ವೃತ್ತಪತ್ರಿಕೆ ಯಾವ ಶೈಶವಾವಸ್ಥೆಯಲ್ಲಿದೆ. ನನ್ನ ಸ್ನೇಹಿತರಾದ ರಾಘವೇಂದ್ರರಾಯರು 'ದೇಶಮಿತ್ರ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದ್ದಾರೆ. ಅವರು ಹೇಳುತ್ತಿದ್ದ ಮಾತು ಈಗ ಜ್ಞಾಪಕಕ್ಕೆ ಬಂದಿತು. ವಿದ್ಯಾವಂತರಾದ ತರುಣರು ವೃತ್ತಪತ್ರಿಕೆಗಳ ಅಭ್ಯುದಯಕ್ಕೆ ಸಹಾಯ ಮಾಡಬೇಕು. ನಿಜಸ್ಥಿತಿಯಲ್ಲಿ ಯಾರೂ ಬರುವುದಿಲ್ಲ ಎಂದು ಹೇಳಿದ್ದರು. ಅವರಿಗೊಂದು ಪತ್ರ ಬರೆದು ಕೊಡುತ್ತೇನೆ. ಹೋಗಿ ಕಾಣು' ಎಂದು ಬರೆದುಕೊಟ್ಟು ಕಳುಹಿಸಿದರು.

ನಂಜಪ್ಪನವರು ಈ ಸಮಾಚಾರವನ್ನು ಕೇಳಿ 'ನಾನು ಹೇಳಲಿಲ್ಲವೇ ಸುಮ್ಮನೆ ಕೂತುಕೊಂಡರೆ ಯಾರಪ್ಪಾ ಕೆಲಸ ಕೊಡುತ್ತಾರೆ' ಎಂದು ಮಾತು ಸೇರಿಸಿದರು.

ರಾಘವೇಂದ್ರರಾಯರ 'ದೇಶಮಿತ್ರ' ಕಾರ್ಯಾಲಯ'ಕ್ಕೆ ಮಾರನೆಯ ದಿನವೇ ರಾಜಶೇಖರನು ಹೊರಟನು. ರಾಘವೇಂದ್ರರಾಯರು ಪತ್ರವನ್ನು ನೋಡಿ 'ಆಗಲಿಕಣಯ್ಯ ನಾಳೆಯಿಂದಲೇ ಕೆಲಸ ಮಾಡು. ತಿಂಗಳಾದಮೇಲೆ ನಿನ್ನ ಸಂಬಳವನ್ನು ಗೊತ್ತುಮಾಡುತ್ತೇನೆ. ಸಹಸಂಪಾದಕರು ಸುಬ್ಬರಾಯರು ಇದ್ದಾರೆ. ಅವರಿಗೆ ಹೇಳಿ ಒಂದು ಕುರ್ಚಿ ಮೇಜು ಹಾಕಿಸಿ ಕೊಡುತ್ತೇನೆ. ಮೊದಲು ಹೊರಗಿನ ಇಂಗ್ಲೀಷ್ ವೃತ್ತಪತ್ರಿಕೆಗಳಿಂದ ಸಮಾಚಾರವನ್ನು ಕನ್ನಡಿಸಬೇಕು. ಆಮೇಲೆ ಚಂದಾದಾರರು ಹೆಚ್ಚಾಗುತ್ತಲೂ ನಮ್ಮ ಪತ್ರಿಕೆಗೆ ತರಿಸುವ ಎ. ಪಿ. ಐ. ರಾಯಟರ್ಸ್ ವಾರ್ತೆಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಬೇಕಾಗುವುದು' ಎಂದು ಹೇಳಿದರು

ರಾಜಶೇಖರನು ಹಿಗ್ಗಿಹೋದ. ತಾನೂ ಒಬ್ಬ ಮನುಷ್ಯನಾಗಿ ಸೀತಾಲಕ್ಷ್ಮಿಯೊಡನೆ ಬೇರೆ ಸಂಸಾರ ಮಾಡಬಹುದಲ್ಲಾ ಎಂಬ ಉತ್ಸಾಹದಲ್ಲಿ ಕೆಲಸವನ್ನು ಬಹಳ ಮುತುವರ್ಜಿಯಿಂದ ಮಾಡುತ್ತಿದ್ದ. ಆ ತಿಂಗಳ ಕೊನೆ

ಯಲ್ಲಿ ರಾಘವೇಂದ್ರರಾಯರನ್ನು ತನ್ನ ಸಂಬಳದ ವಿಚಾರದಲ್ಲಿ ಪ್ರಶ್ನಿಸಿದ. ಅವರು 'ಅಲ್ಲಯ್ಯಾ? ಒಂದು ತಿಂಗಳೂ ಆಗಿಲ್ಲ... ಮುಂದಿನ ತಿಂಗಳು ಎರಡೂ ತಿಂಗಳ ಸಂಬಳವನ್ನೂ ಕೊಡುತ್ತೇನೆ.' ಎಂದು ಹೇಳಿ ಕಳುಹಿಸಿದರು. ರಾಜಶೇಖರನು ಹಾಗೆಯೇ ಆಗಲೆಂದು ತಿಂಗಳ ಕೊನೆಯನ್ನು ಕಾಯುತ್ತಿರುವಷ್ಟರಲ್ಲೇ ದೇಶಮಿತ್ರ ಕಾರ್ಯಾಲಯವು ಮುಚ್ಚಲ್ಪಡುವುದು ಎಂಬ ಸಂಗತಿ ಅವನಿಗೆ ತಿಳಿಯಿತು. ರಾಘವೇಂದ್ರರಾಯರ ಹತ್ತಿರ ಮೊದಲೇ ಹೋಗಿ ತನ್ನ ಸಂಬಳವನ್ನು ಕೇಳಿದ. 'ನಮ್ಮ ಕಾರ್ಯಾಲಯವನ್ನೇ ಮುಚ್ಚುವಾಗ ನಿನ್ನ ಸಂಬಳ ಎಲ್ಲಿಂದ ಕೊಡುವುದಕ್ಕಾಗುತ್ತದೆ. ಎರಡು ತಿಂಗಳು ಕನ್ನಡ ವೃತ್ತಪತ್ರಿಕೆಯ ಸೇವೆ ಮಾಡಿದೆ ಎಂದು ತಿಳಿದುಕೋ....ಅಷ್ಟೇ' ಎಂದಷ್ಟೇ ರಾಯರು ಉತ್ತರಿಸಿದರು.

ಒಳ್ಳೆ ಕನ್ನಡ ಸೇವೆ ಎನ್ನುತ್ತಾ ತಲೆಯಮೇಲೆ ಕೈ ಹೊತ್ತು ರಾಜಶೇಖರ ಮನೆಗೆ ತೆರಳಿದ.

ಅಂದು ರಾಜಶೇಖರನ ಆಗಮನವನ್ನೇ ಕಾಯುತ್ತಾ ಅವನ ಅತ್ತಿಗೆ ಕಾದು ನಿಂತಿದ್ದರು. ಅವನು ಬಂದಕೂಡಲೇ " ರಾಜ, ನಿನ್ನ ಹೆಂಡತಿಗೆ ಮೂರು ನಾಲ್ಕು ದಿನದಿಂದ ಮೈ ಸರಿಯಿಲ್ಲ ಎನ್ನುತ್ತಿದ್ದಳಪ್ಪಾ. ಇವತ್ತು ಅವಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದೆ. ಲೇಡಿ ಡಾಕ್ಟರ್ ನೋಡಿ ಹುಡುಗಿ ಬಹಳ ಕೃಶಳಾಗಿದ್ದಾಳೆ. ಮೊದಲನೆಯದಾದ್ದರಿಂದ ಸರಿಯಾಗಿ ಆರೈಕೆ ಕೊಡಿಸಬೇಕು ಎಂದು ಹೇಳಿದರು" ಎಂದರು.

' ಏನು ಹಾಗಂದರೆ....ಸರಿಯಾಗಿ ತಿಳಿಸಬಾರದೆ.'

' ನಿನ್ನ ಹೆಂಡತಿಗೆ ಈಗ ಐದು ತಿಂಗಳು. ಅವಳ ಆರೈಕೆ ನಡೆಯಬೇಕಾದರೆ ಅವಳ ತಾಯಿಯ ಮನೆಗೆ ಕಳುಹಿಸುವುದಕ್ಕೆ ಏರ್ಪಾಟು ಮಾಡು' ಎಂದು ಒಳಕ್ಕೆ ಹೊರಟರು.

ರಾಜಶೇಖರನಿಗೆ ತನ್ನ ಹೆಂಡತಿ ಬಸುರಿ ಎಂಬ ಸಂಗತಿ ಅಷ್ಟೇನೂ ಆನಂದವನ್ನುಂಟುಮಾಡಲಿಲ್ಲ. ಮೊದಲೇ ಹೆಂಡತಿಯೊಬ್ಬಳನ್ನು ಸಾಕಲಾರದವನು ಜೊತೆಗೆ ಮಗು ಬೇರೆ ಕೂಡಿದರೆ ಏನು ಗತಿ ಎಂದು ಹೆದರಿದ. ಅವನ ಬಾಯಿಂದ ಮಾತು ಹೊರಡಲಿಲ್ಲ. ರೂಮಿಗೆ ತೆರಳಿ ತಲೆಯಮೇಲೆ ಕೈಯಿಟ್ಟುಕೊಂಡು ಚಿಂತಿಸುತ್ತಾ ಕುಳಿತ. ಈ ವಿಚಾರವನ್ನು ಉಪಾಯದಲ್ಲಿ ತಿಳಿಸ

ಬೇಕೆಂದು ಸೀತಾ ಯೋಚಿಸಿದ್ದಳು. ಆದರೆ ನಂಜಪ್ಪನವರ ಹೆಂಡತಿ ತಿಳಿಸಿದ ರೀತಿಯು ಅವಳಿಗೂ ವ್ಯಸನವನ್ನುಂಟುಮಾಡಿತು. ರಾಜಶೇಖರನ ಬಳಿ ಬಂದು ಮೆಲ್ಲನೆ 'ಯೋಚನೆ ಮಾಡಬೇಡಿ' ಎಂದಳು.

ರಾಜಶೇಖರ ಅವಳ ಕಡೆ ನೋಡಿ, 'ಅತ್ತಿಗೆ ಈಗ ಹೇಳಿದ್ದು ನಿಜವೇ ?' ಎಂದು ಪ್ರಶ್ನಿಸಿದನು.

'ಹೌದು ನಿಜ....ಅದರಿಂದ ನಿಮಗೆ ಬೇಸರವಾಯಿತೆ ?'

'ಬೇಸರ ಅಂತ ಕೇಳುತ್ತೀಯಲ್ಲಾ, ಏನು ಹೇಳಲಿ ನಾನು.'

'ನೀವು ಹೀಗೆಲ್ಲಾ ಮನಸ್ಸಿಗೆ ತಂದುಕೊಳ್ಳಬಾರದು........ನನ್ನಿಂದ ಏನಾದರೂ ನಿಮಗೆ ತೊಂದರೆಯಾಗಿದ್ದರೆ ಹೇಳಿ....'

'ನಿನ್ನಿಂದ ಅಂತ ಯಾರು ಹೇಳಿದರು ಸೀತಾ....ನಮ್ಮಿಬ್ಬರ ಹೊಟ್ಟೇ ಪಾಡಿಗೇ ಕಷ್ಟವಾಗಿರುವಾಗ ಒಂದು ಮಗು ಬೇರೆ ಬಂದರೆ ಏನುಗತಿ ಎಂದು ಯೋಚನೆ.'

'ಅದೆಲ್ಲಾ ಯೋಚಿಸಿದರೆ ಆಗುತ್ತದೆಯೇ ? ದೇವರು ಇದ್ದಾನೆ. ಎಲ್ಲಾನೂ ನಡಿಸಿಕೊಡುತ್ತಾನೆ....'

'ಹೌದು. ಅದೇ ದೇವರೇ ಎರಡು ತಿಂಗಳು ನನ್ನ ಕೈಯಿಂದ ಕೆಲಸ ಮಾಡಿಸಿಕೊಂಡು ಅದಕ್ಕೆ ಮೂರು ಕಾಸು ಪ್ರತಿಫಲ ಕೊಡದೆ ಮನೆಗೆ ಹೋಗಪ್ಪಾ ಅಂದಿದ್ದು....ಹೋಗಲಿ ಸೀತೆ ಮದುವೆಯಾದಾಗನಿಂದಲೂ ಅದೇ ಹರುಕು ಸೀರೆ ಉಡುತ್ತಿದ್ದೀಯಲ್ಲಾ ? ಅದನ್ನೇ ನೋಡಿ ಸುಮ್ಮನಿರ ಬೇಕಾಗಿದೆಯಲ್ಲಾ ನಾನು....'

'ಅದನ್ನೇನು ಬಹಳವಾಗಿ ತಿಳಿದುಕೊಳ್ಳಬೇಡಿ, ನೀವು ಸುಖವಾಗಿರುವುದೇ ನನ್ನ ಸುಖ.'

'ಸೀತಾ ನಿನ್ನ ಮನಸ್ಸು ನಿಜವಾಗಿಯೂ ದೊಡ್ಡದುಮಾಡಿ ನನ್ನ ಕೈ ಹಿಡಿದೆ....'

'ಹಾಗೆ ಹುಚ್ಚು ಹುಚ್ಚಾಗಿ ಮಾತನಾಡಬೇಡ. ಏಳಿ ಹೊತ್ತಾಯಿತು.'

ಸೀತಾಲಕ್ಷ್ಮಿ ಈ ವಿಷಯಗಳನ್ನೊಂದೂ ಕಾಗದದಲ್ಲಿ ತನ್ನ ತಾಯಿಗೆ ತಿಳಿಸಿರಲಿಲ್ಲ. ಆದರೆ ಮನೆಗೆ ಹೋದಮೇಲೆ ಎಲ್ಲವನ್ನೂ ತಿಳಿಸಲೇಬೇಕಾಯಿತು. ಇದರಿಂದ ರಾಜಶೇಖರನ ಮೇನೆ ಪಾರ್ವತಮ್ಮನವರ ಮಮತೆ

ಮತ್ತಷ್ಟು ಹೆಚ್ಚಿತು. ಅದರೊಂದಿಗೆ ಸೀತೆ ಬಡಕಲಾಗಿ ಬಂದದ್ದೂ, ಸೀರೆಯ ಜೂಲನ್ನೇ ಹೊಲಿದುಕೊಂಡು ಬಂದದ್ದೂ, ಅವರ ದುಃಖವನ್ನು ಇಮ್ಮಡಿಸಿತು. ರಾಜಶೇಖರನ ಗುಣವೇನೋ ಒಳ್ಳೆಯದು. ಆದರೆ ಮನೆಯ ಆಡಳಿತವೆಲ್ಲಾ ಅವನ ಅತ್ತಿಗೆಯ ಕೈಯಲ್ಲಿದ್ದುದರಿಂದ ಸೀತಾಲಕ್ಷ್ಮಿಯು ಬಡಕಲಾಗಬೇಕಾಯಿತು.

ಈ ದುಃಖ ಸಂಕಟಗಳೊಡನೆ ಭಾಗ್ಯಳ ಭವಿಷ್ಯ ಪಾರ್ವತಮ್ಮನವರನ್ನು ದಂಗು ಬಡಿಸುವ ಹಾಗೆ ಮಾಡುತ್ತಿತ್ತು. ಭಾಗ್ಯ ಸೀತೆಯರು ಮಲಗಿದಮೇಲೆ ಹಾಗೆಯೇ ಕುಳಿತು ಯೋಚಿಸುತ್ತಿದ್ದರು. ಅವರ ಮನದಲ್ಲಿ ಬಹಳ ಯೋಚನೆಯೂ ದುಃಖವೂ ಹರಿದಾಡುತ್ತಿತ್ತು. ಕೊನೆಗೆ ಏನೂ ತೋಚದಿರಲು ಅರೆ-ನಿದ್ರೆಯಲ್ಲಿಯೇ ರಾತ್ರಿಯನ್ನು ಕಳೆಯುತ್ತಿದ್ದರು.

ಪಾರ್ವತಮ್ಮನವರ ದೇಹಸ್ಥಿತಿಯು ಚಿಂತೆಯಿಂದ ಬಹಳವಾಗಿ ಕುಂದಿತು. ದಿನ ಕಳೆದಂತೆಲ್ಲಾ ಸೀತೆಯ ಹೆರಿಗೆಯು ಸಮೀಪವಾಗುತ್ತಿತ್ತು. ಮನೆಯ ಸ್ಥಿತಿಯನ್ನೋ ವರ್ಣಿಸುವ ಹಾಗೆ ಇರಲಿಲ್ಲ. ಪಾರ್ವತಮ್ಮನವರ ಚಿಕ್ಕ ಚಿಕ್ಕ ಸಾಲಗಳು ಬೆಳೆಯುತ್ತಾ ಬಂದವು. ಸಂಸಾರ ಸುಸೂತ್ರವಾಗಿ ನಡೆಯುವುದೂ ಸ್ವಲ್ಪ ಕಷ್ಟವಾಯಿತು. ಕೊನೆಗೆ ರಂಗೈಯ್ಯ ಶೆಟ್ಟರಿಗೆ ಇದ್ದ ಚಿಕ್ಕ ಗದ್ದೆಯನ್ನೂ ಮಾರಿದರು. ಬಂದ ಹಣದಿಂದ ತುರ್ತಾಗಿದ್ದ ಸಾಲಗಳನ್ನೆಲ್ಲಾ ತೀರಿಸಿದರು. ಉಳಿದ ಹಣವೇನೂ ಬಹಳ ದಿನ ಅವರ ಬಳಿಯಲ್ಲಿರುವ ಆಶಾಸೂಚನೆ ತೋರಿಸಲಿಲ್ಲ. ಹತ್ತಿರವಿದ್ದ ಕೆಲವು ಒಡವೆಗಳೇ ಅವರ ಆಸ್ತಿಯಾಗಿ ಉಳಿದವು.

ಭಾಗ್ಯಳ ವಯಸ್ಸು ಹದಿನಾರಾಗುತ್ತಾ ಬಂತು. ಮೊದಲು ಮೊದಲಲ್ಲಿ ಅವಳಿಗೆ ಗಂಡನನ್ನು ಗೊತ್ತುಮಾಡಲು ಪಾರ್ವತಮ್ಮನವರು ಬಹಳ ಪ್ರಯಾಸಪಟ್ಟರು. ಈ ಯತ್ನಗಳೊಂದೂ ಆಗುವುದಿಲ್ಲವೆಂದು ಭಾಗ್ಯಳಿಗೆ ಚನ್ನಾಗಿ ಗೊತ್ತಿತ್ತು. ಅಲ್ಲದೆ ತಾನು ತನ್ನ ತಾಯನ್ನಗಲಿರಬಾರದೆಂದು ನಿರ್ಧಾರ ಮಾಡಿದ್ದಳು. ತಾಯಿಯ ದೇಹಸ್ಥಿತಿ ದಿನೇ ದಿನೇ ಕುಂದುತ್ತಾ ಇದ್ದಿತು. ಇಂತಹುದರಲ್ಲಿ ತಾನೂ ಮದುವೆಯಾಗಿ ಗಂಡನ ಮನೆಗೆ ಹೋದರೆ ತನ್ನ ತಾಯಿಗೆ ಗತಿಯಾರು? ಎಂಬ ಪ್ರಶ್ನೆ ಅವಳ ಮನಸ್ಸನ್ನು ಆಗಾಗ ಕೊರೆಯು

ತ್ತಿತ್ತು. ತನ್ನ ತಾಯಿಗೆ ಕೊನೆಯುವರೆವಿಗೂ ತಾನೇ ಜೊತೆ ಎಂದು ನಿರ್ಧರಿಸಿ, ಜೀವನವನ್ನು ಧೈರ್ಯದಿಂದ ಎದುರಿಸಲು ಮನಸ್ಸುಮಾಡಿದಳು.

ಭಾಗ್ಯ, ಸೀತೆಯ ಹಾಗೆ ತಾಯಿಯ ಮುಂದೆ ಕುಳಿತು ದುಃಖವನ್ನು ಹೇಳಿಕೊಳ್ಳುತ್ತಿರಲಿಲ್ಲ. ಬದಲು ವಾಸ್ತವಿಕ ಸ್ಥಿತಿಯನ್ನು ತಿಳಿದು ಸಾಧ್ಯವಾದಷ್ಟು ಸಂತೋಷದಿಂದಿರುವುದಕ್ಕೆ ಯತ್ನಿಸುತ್ತಿದ್ದಳು. ಆದರೂ ತಾನು ದೊಡ್ಡ ಹುಡುಗಿ ಎಂಬುದು ಮಾತ್ರ ಅವಳ ಮನಸ್ಸಿಗೆ ಬೀಳುತ್ತಿರಲಿಲ್ಲ. ಸೈಕಲ್ ಬಿಡುವುದು, ಮನೆಯ ಮುಂದಿದ್ದ ಸಂಪಿಗೆ ಮರ ಹತ್ತುವುದು, ಇವೇ ಇವಳ ದಿನಚರಿಯಲ್ಲಿ ಮುಖ್ಯ ಕಾರ್ಯಗಳಾಗಿದ್ದವು.

'ಭಾಗ್ಯಾ! ನಿನ್ನ ಬಸುರೀಲಿ ಹುಟ್ಟುವ ಮಗು ಗಂಡೆಂದೇ ತಿಳಿದಿದ್ದೆ ಕಣೇ....' ಎಂದು ಒಂದೊಂದು ಸಲ ಹೇಳುತ್ತಿದ್ದರು.

ಮದುವೆಯ ಪ್ರಯತ್ನ ಸಫಲವಾಗದುದರಿಂದ ಅವಳ ಓದಿನ ಕಡೆ ಹೆಚ್ಚು ಗಮನ ಬೀಳಲಾರಂಭಿಸಿತು. ಮೊದಲಿನಿಂದಲೂ ಆಕೆ ಕ್ಲಾಸಿನಲ್ಲಿ ಮೊದಲನೆಯ ಹುಡುಗಿಯೇನೂ ಆಗಿರಲಿಲ್ಲ. ಮನೆಯಲ್ಲಂತೂ ಪುಸ್ತಕದ ಗೋಜಿಗೆ ಹೋಗುತ್ತಿರಲಿಲ್ಲ. ಓದುವ ಪುಸ್ತಕಗಳಿಲ್ಲವೆಂದು ಹೇಳಿ ಆಗಾಗ ನೆರೆಯ ರತ್ನ, ಕಮಲ ಇವರುಗಳ ಮನೆಯಲ್ಲಿ ಕಾಲ ಕಳೆಯುತ್ತಿದ್ದಳು. ಆದರೂ ಹದಿನಾರನೆಯ ವಯಸ್ಸಿಗೇ ಸ್ಕೂಲ್ ಫೈನಲ್ ತರಗತಿಯನ್ನು ಪ್ರವೇಶಿಸಿದಳು.

* * * *

ಪಾರ್ವತಮ್ಮ ಬಂದು ತನ್ನನ್ನು ಮರೆಹೊಗುತ್ತಾರೆ. ಆಗ ಅವರನ್ನು ಚೆನ್ನಾಗಿ ಹಂಗಿಸಬೇಕೆಂದು ರಾಮುವು ಮನಸ್ಸಿನಲ್ಲೇ ಎಣಿಸಿದ್ದ. ಬೆಳೆದು ನಿಂತಿದ್ದ ಭಾಗ್ಯಳ ಮದುವೆ ಹೇಗೆ ಮಾಡುತ್ತಾರೆ ನೋಡೋಣ ಎಂದು ಶಾಂತಯ್ಯನ ಹತ್ತಿರ ವಿಕಟವಾಗಿ ನುಡಿಯುತ್ತಿದ್ದ. ಆಗ ಅನಂತಯ್ಯ 'ಅವಳನ್ಯಾರು ಮದುವೆ ಮಾಡಿಕೊಳ್ಳ್ತಾರು..... .. ನೋಡಿಲ್ಲವೇನು, ನೀನು. ಬಜಾರಿ, ಗಂಡಸರು ಬಿಡುವ ಹಾಗೆ ಸೈಕಲ್ ಬಿಡುವುದನ್ನು....' ಎಂದ.

'ಸರಿ, ಸರಿ, ಅವಳನ್ನು ಮದುವೆಯಾದವನ ಮಾನವನ್ನು ಮೂರು ಕಾಸಿಗೆ ಬೇಕಾದರೂ ಮಾರುವುದಕ್ಕೆ ತಯಾರಿದ್ದಾಳೆ' ಎಂದ ಶಾಂತಯ್ಯ.

'ನೀನು ಇನ್ನೊಂದು ಸಮಾಚಾರ ಕೇಳಿದೆಯಾ....ನಿನ್ನ ಚಿಕ್ಕಮ್ಮಾ ಅವಳಿಗೆ ಮದುವೇನೇ ಮಾಡೋದಿಲ್ಲವಂತೆ ...'

'ಹಾಗಾದರೆ ಏನು ಆಗಬೇಕಂತೆ ಭಾಗ್ಯ' ಎಂದು ರಾಮಪ್ಪನು ಪ್ರಶ್ನಿಸಿದ.

'ಗೊತ್ತಿಲ್ಲವೇ ? ಕೊನೆಗೆ ಹಾದರಗಿತ್ತಿಯಾಗುವುದು' ಎಂಬುದಾಗಿ ಶಾಂತಯ್ಯನು ಮಾತು ಮುಗಿಸುತ್ತಿದ್ದ. ಇದು ಆಗಾಗ ಸಾಗುತ್ತಿದ್ದ ಚೇಕೆಯ ವೈಖರಿ.

ತನ್ನ ಬಾಣಂತನ ಮುಗಿದರೂ ಗಂಡನಿಂದ ಕಾಗದವೇ ಬರಲಿಲ್ಲವಲ್ಲಾ ಎಂದು ಸೀತೆ ವ್ಯಾಕುಲಚಿತ್ತಳಾದಳು. ತನ್ನ ಮುದ್ದು ಮಗನ ವಿಷಯವಾಗಿ ಬರೆದಿದ್ದ ಕಾಗದಕ್ಕೂ ಉತ್ತರವೇ ಬಂದಿರಲಿಲ್ಲ.

ಪಾರ್ವತಮ್ಮನವರಿಗೂ ಸ್ವಲ್ಪ ಯೋಚನೆಯುಂಟಾಯಿತು. ಅಕ್ಕಪಕ್ಕದವರು ಭಾಗ್ಯಳಿಗೆ ಮದುವೆ ಮಾಡದಿದ್ದಕ್ಕಾಗಿ ಅವರನ್ನು ಹಾಸ್ಯ ಮಾಡುತ್ತಿದ್ದರು. ಜೊತೆಗೆ ಏನು ಎಷ್ಟುದಿನ ಸೀತಾಲಕ್ಷ್ಮಿಯ ಬಾಣಂತನ ಎಂಬುದಾಗಿ ಹಂಗಿಸುವ ಹಾಗೆ ವಿಚಾರಣೆಯೂ ನಡೆಯುತಿತ್ತು. ಆದುದರಿಂದ ತಮ್ಮ ಬೀಗರ ಮನೆಯಿಂದ ಸದ್ಯ ಕಾಗದ ಬಂದರೆ ಸಾಕೆಂದು ಅವರೂ ಎದರು ನೋಡುತ್ತಿದ್ದರು.

ಆದರೆ ಕಾಗದದ ಬದಲು ನಂಜಪ್ಪನವರೇ ಅಡಾವುಡಿಯಿಂದ ಬಂದು 'ರಾಜಶೇಖರನೇನಾದರೂ ಬಂದಿದ್ದಾನೆಯೇ' ಎಂದು ವಿಚಾರಿಸಿದರು. ಆಶ್ಚರ್ಯದಿಂದ ಸಮಾಚಾರವೇನೆಂಬುದಾಗಿ ಪಾರ್ವತಮ್ಮ ಕೇಳಿದರು. ರಾಜಶೇಖರ ಮನೆ ಬಿಟ್ಟು ಐದು ದಿನವಾದರೂ ಹಿಂದಿರುಗಿಲ್ಲ ಎಂದರು ನಂಜಪ್ಪ.

ನಂಜಪ್ಪನವರೂ ಮತ್ತು ಅವರ ಹೆಂಡತಿ ಇಬ್ಬರೂ, ಹೆಂಡತಿಯನ್ನು ಕರೆಸೆಂದು ರಾಜಶೇಖರನನ್ನು ಬಲವಂತ ಪಡಿಸುತ್ತಿದ್ದರು. ನಂಜಪ್ಪನವರ ಹೆಂಡತಿಗೆ ಎಂಟು ತಿಂಗಳಾಗಿತ್ತು. ಬಾಣಂತನ ಮಾಡುವುದಕ್ಕೂ ಮೇಲಿನ ಕೆಲಸಕ್ಕೂ ಮನೆಯಲ್ಲಿ ಇನ್ಯಾರೂ ಇರಲಿಲ್ಲ. ಎಂತಲೇ ಆಕೆ 'ದಿಮ್ಮನರಂಗ ಅಂತ ಹೋಗಿ ತಾಯಿ ಮನೇಲಿ ಕೂತುಕೊಂಡಿದ್ದಾಳೆ. ಇನ್ನೂ ಗಂಡನ ಮನೆ ಯೋಚನೆ ಬಂದಿಲ್ಲಾ ಅಂತ ಕಾಣುತ್ತೆ. ನೀವಾದರೂ ರಾಜಶೇಖರನಿಗೆ ಹೇಳಬಾರದೇ ಅವಳನ್ನು ಕರೆಸು..ಅಂತ' ಎಂದು ನಂಜಪ್ಪನವರ ಹತ್ತಿರ ಮೂದಲಿಸಿ

ದರು. ಅವರೂ ಕೂಡ ಸೀತಾಲಕ್ಷ್ಮಿ ಬಂದರೆ ಸ್ವಲ್ಪ ತಮ್ಮ ಹೆಂಡತಿಗೆ ಬಿಡುವು ದೊರೆಯಬಹುದೆಂದು ಭಾವಿಸಿ, ರಾಜಶೇಖರನಿಗೆ ಅವಳನ್ನು ಕರೆಯಿಸುವ ಹಾಗೆ ಹೇಳಿದರು.

ಅವನು ಮೊದಲು ಅದನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಆಕೆ ಬಂದರೆ ತನ್ನ ಅತ್ತಿಗೆ ಸೇವೆ ಮಾಡಬೇಕಾಗುವುದೆಂಬದನ್ನು ತಿಳಿಯಲು ಅವನಿಗೆ ಹೆಚ್ಚುಹೊತ್ತು ಹಿಡಿಯಲಿಲ್ಲ. ಬೇರೆ ಸಂಸಾರ ಹೂಡೋಣವೆಂದರೆ ಸರಿಯಾದ ಕೆಲಸವ್ಯಾವುದೂ ದೊರೆತಿರಲಿಲ್ಲ. ತನ್ನ ಹೆಂಡತಿಯ ದಾಸ್ಯ ಮತ್ತು ತನ್ನ ಪರದಾಟ ಇವುಗಳನ್ನು ಯೋಚಿಸಿ ಯೋಚಿಸಿ ಹುಚ್ಚು ಹಿಡಿದಂತಾಯಿತು ರಾಜಶೇಖರನಿಗೆ....ಅವನು ಇನ್ನೂ ಸುಮ್ಮನಿರುವುದನ್ನು ನೋಡಿ ಕೊನೆಗೆ ನಂಜಪ್ಪನವರು " ಏನು ಗಂಡಸೋ ನೀನು. ನಿನಗೆ ಕಾಗದ ಬರೆಯುವುದಕ್ಕೆ ಆಗುವುದಿಲ್ಲ ಅಂದಿದ್ದರೆ ನಾನೇ ಬರೆಯುತ್ತಿದ್ದೆ ...ಮುಂದಿನ ವಾರ ಹೇಗಿದ್ದರೂ ಬೆಂಗಳೂರಿಗೆ ಸರಕಾರಿ ಕೆಲಸದ ಮೇಲೆ ಹೋಗಬೇಕಾಗಿದೆ. ಆಗ ನನ್ನ ಜೊತೇಲೇ ಕರೆದುಕೊಂಡು ಬರುತ್ತೇನೆ" ಎಂದರು.

ಆವಾಗಿನಿಂದಲೂ ರಾಜಶೇಖರನ ಮನಸ್ಸು ಸ್ಥಿಮಿತದಲ್ಲಿರಲಿಲ್ಲ. ತನ್ನ ಹೆಂಡತಿ ಬರುವುದರೊಳಗಾಗಿ ಯಾವುದಾದರೊಂದು ಉದ್ಯೋಗದಲ್ಲಿರ ಬೇಕೆಂದು ಸತತ ಪ್ರಯತ್ನ ಪಟ್ಟನು. ಆದರೆ ಅವನ ಯತ್ನಗಳು ನಿಷ್ಫಲ ವಾದವು. ಕೊನೆಗೆ, ಈ ಊರಿನಲ್ಲಿದ್ದರೆ ತಾನೇ, ತನ್ನ ಹೆಂಡತಿಗೆ ಕಷ್ಟ ಮತ್ತು ತನಗೆ ಪರದಾಟವೆಂದು ಭಾವಿಸಿ ಎಲ್ಲಿಗಾದರೂ ಹೋಗಬೇಕೆಂದು ಕೂಡಲೇ ನಿರ್ಧರಿಸಿದನು. ಅಂದು ರಾತ್ರಿ ಮನೆ ಬಿಟ್ಟವನು ಹಿಂದಿರುಗಲೇ ಇಲ್ಲ. ನಂಜಪ್ಪನವರೂ ಮತ್ತು ಅವರ ಹೆಂಡತಿಯೂ ತಮಗೆ ತಿಳಿಸದೆ ಯೇನೇ ರಾಜಶೇಖರ ಹೆಂಡತಿಯ ಮನೆಗೆ ಹೋಗಿರಬೇಕೆಂದು ತಿಳಿದುಕೊಂಡಿ ದ್ದರು. ಆದರೆ ಅಕಸ್ಮಾತ್ತಾಗಿ ಮೈಸೂರಿಗೆ ಬಂದಿದ್ದ ರಂಗೈಯ ಶೆಟ್ಟರಿಂದ ರಾಜಶೇಖರನೇನೂ ಹೆಂಡತಿಯ ಮನೆಗೆ ಹೋಗಿಲ್ಲವೆಂದೂ ತಿಳಿದು ಬಂದಿತು. ಘಾಬರಿಯಿಂದ ಮನೆಗೆ ಓಡಿಬಂದು ರಾಜಶೇಖರನ ಕೋಣೆಯನ್ನು ಪ್ರವೇಶಿ ಸಿದರು. ಸ್ವಲ್ಪ ಹೊತ್ತು ಹುಡುಕಾಡಿದ ಮೇಲೆ ಒಂದು ಪತ್ರ ದೊರೆಯಿತು. ಅದರ ಒಕ್ಕಣೆ ಹೀಗಿತ್ತು.

ಶ್ರೀ. ಸ. ಅಣ್ಣನವರಿಗೆ,

ಕೆಲಸಕ್ಕಾಗಿ ಈ ಊರಲ್ಲಿ ಅಲೆದಲೆದು ಸಾಕಾಯಿತು. ನನ್ನ ಅದೃಷ್ಟ ಈ ಊರಿನಲ್ಲಿ ಚೆನ್ನಾಗಿಲ್ಲವೆಂದು ಕಾಣುತ್ತೆ. ಬೇರೆ ಊರಿನಲ್ಲಾದರೂ ಅದೃಷ್ಟ ಪರೀಕ್ಷೆ ಮಾಡಬೇಕೆಂದಿದ್ದೇನೆ. ಇಲ್ಲಿಯ ವರೆವಿಗೂ ನಿಮಗೆ ಕೊಟ್ಟ ತೊಂದರೆಗಾಗಿ ನನ್ನನ್ನು ಕ್ಷಮಿಸಿ. ಕೆಲಸ ದೊರೆತ ಕೂಡಲೇ ಸೀತಾಲಕ್ಷ್ಮಿಗೆ ಕಾಗದ ಬರೆಯುತ್ತೇನೆಂಬುದಾಗಿ ತಿಳಿಸಿರಿ.

ಇತಿ, ಬೇಡುವ ಆಶೀರ್ವಾದ

" ರಾಜಶೇಖರ "

ಮಾರನೆಯ ದಿನ ಬೆಂಗಳೂರಿಗೆ ಹೋದಾಗ ಪಾರ್ವತಮ್ಮನವರಿಗೂ ಈ ಸುದ್ದಿಯನ್ನು ತಿಳಿಸಿದರು. ಸೀತಾಲಕ್ಷ್ಮಿ ಇದ್ದಲ್ಲಿಯೇ ಅರ್ಧವಾಗಿ ಬಿಟ್ಟಳು. ಭಾಗ್ಯಳು ಮಾತ್ರ ಈ ವಿಷಯಕ್ಕೆ ಮಹತ್ವವನ್ನೇನೂ ಕೊಡಲಿಲ್ಲ. ಪಾರ್ವತಮ್ಮ ಹೊರಗೆ ಮುಖವಿಡದೆಯೇ ಮನೆಯಲ್ಲೇ ಕೊರಗುತ್ತಾ ಕುಳಿತರು. ಇವರು ಹೊರಗಡೆ ಹೋಗದಿದ್ದರೂ ಇವರ ಮನೆಗೇ ನೆರೆಯವರು ಬಂದು ಇವರನ್ನು ವ್ಯಂಗವಾಗಿ ಪ್ರಶ್ನಿಸುತ್ತಿದ್ದರು. 'ಎಲ್ಲಾ ನನ್ನ ಕರ್ಮಾ ಮ್ಮಾ. ನನ್ನ ಹೀನ ಭಾಗ್ಯ, ನನ್ನ ಮಕ್ಕಳಿಗೂ ಸೋಕುತ್ತಿದೆ.' ಎಂದು ಹೇಚಾಡುತ್ತಿದ್ದರು. ಆದರೆ ಭಾಗ್ಯಳನ್ನು ಯಾರಾದರೂ ನಿನ್ನ ಭಾವ ಎಲ್ಲಿಯೋ ಓಡಿ ಹೋಗಿದ್ದಾನಂತಲ್ಲೇ ಎಂದು ಪ್ರಶ್ನಿಸಿದರೆ ಅದೇನು ದೊಡ್ಡ ಸಮಾಚಾರ ಅಂತ ಕೇಳುತ್ತೀರಾ ಹೋಗಿದ್ದರೆ ಕೆಲಸ ಸಂಪಾದಿಸುವುದಕ್ಕೆ ಹೋಗಿದ್ದಾರೆ. ಅದು ಸಿಕ್ಕಿದ ಮೇಲೆ ನಮಗೆ ತಿಳಿಸೇ ತಿಳಿಸುತ್ತಾರೆ ಎನ್ನುತ್ತಿದ್ದಳು. ಇನ್ನು ಕೆಲವರು 'ಅಂತೂ ಈಗ ಓಡಿಹೋಗಿರುವುದು ನಿಜವೋ' ಎಂದು ಕೆಣಕಿದರೆ 'ನಿಮಗ್ಯಾಕೆ ನಮ್ಮ ಮನೆಯ ವಿಚಾರ' ಎಂದು ಒಂದೇ ಮಾತಿನಲ್ಲಿ ಮೂಗು ಮುರಿಯುತ್ತಿದ್ದಳು.

## ಒಂಭತ್ತು

ಬರಬರುತ್ತಾ ರಾಮುವಿಗೆ ಚಂದ್ರಳಲ್ಲಿ ಬೇಸರವಾಗುತ್ತಾ ಬಂದಿತು. ಅವಳ ಹಾಡುಗಳೂ ಅವಳ ಕೃತ್ರಿಮ ಬೆಡಗುಗಳೂ ಅಸಹ್ಯವಾಗಿ ಕಾಣ ಬಂದಿತು. ಅವನ ಗೆಳೆತನ ದೊರೆತಮೇಲೆ ರಾಜಮ್ಮ ಅನಂತಯ್ಯನನ್ನು ನಿರ್ಲಕ್ಷಿಸುತ್ತಾ ಬಂದಳು. ಇದರಿಂದ ಅನಂತಯ್ಯನಿಗೆ ಮನಸ್ಸು ಸ್ವಲ್ಪ

ಕೇಗಿತು. ಹೇಗಾದರೂ ಮಾಡಿ ರಾಮುವನ್ನು ಚಂದ್ರಳಿಂದ ಬೇರೆ ಮಾಡ ಬೇಕೆಂದು ನಿರ್ಧರಿಸಿದ.

ರಾಮುವಿನ ಹತ್ತಿರ ಮಾತಾಡುವಾಗೆಲ್ಲ ಉಪಾಯದಲ್ಲಿ ಕಾಂತಿಯ ವಿಚಾರವನ್ನು ಸೇರಿಸುತ್ತಿದ್ದನು. ಅದೂ ಅಲ್ಲದೆ ಚಂದ್ರ ಅವನಿಗೆ ಮೋಸ ಮಾಡುತ್ತಿರುವಳೆಂಬುದಾಗಿ ಸೂಚನೆಯಿತ್ತಿದ್ದ. ಈ ವಿಷಯವು ಮಾತ್ರ ನಿಜವಾಗಿತ್ತು. ಬೇಸಿಗೆಕಾಲವಾದುದರಿಂದ ಮದ್ರಾಸ್ ಮುಂತಾದ ಸ್ಥಳಗಳಿಂದ ವಿಹಾರಿಗಳು ಬೆಂಗಳೂರಿಗೆ ಬಂದಿದ್ದರು. ಅಂಥ ಕೆಲವರ ಸ್ನೇಹ ಚಂದ್ರಳಿಗೆ ರಾಜಮ್ಮನ ಮೆಹನತ್ತಿನಿಂದ ದೊರಕಿತ್ತು. ಹೀಗಾಗಿ ಈಚೀಚೆಗೆ ಅವಳಿಗೆ ರಾಮುವಿನ ವಿಷಯದಲ್ಲಿ ಉದಾಸೀನ ಭಾವ. ಬರಬರುತ್ತಾ ಅವನು ಇಲ್ಲದ ಹೊತ್ತಿನಲ್ಲಿ ಅವಳು ಮನೆಯಲ್ಲೇ ಇರುತ್ತಿರಲಿಲ್ಲ. ಒಂದೊಂದು ದಿನ ರಾತ್ರಿ ಬರುತ್ತೇನೆಂದು ಹೇಳಿದಾಗ 'ಇವತ್ತು ರಾತ್ರೆ ಬೇಡಿ....ನನಗೆ ಮೈಸರಿಯಿಲ್ಲಾ ನಾಳೆ ಯಾವಾಗ ಬೇಕಾದರೂ ಬನ್ನಿ....' ಎನ್ನುತ್ತಿದ್ದಳು.

'ಕಳ್ಳ ಮುಂಡೆಗೆ ಎಷ್ಟು ದುಡ್ಡು ಸುರಿಯುತ್ತೇನೆ. ಇವಳು ಹೇಳಿದ ಹಾಗೆ ಹೋಗಲು ನಾನೇನು ಅವಳ ಗುಲಾಮನೇ' ಎನ್ನುವ ಭಾವ, ಕೂಡಲೇ ರಾಮುವಿನ ಮನಸ್ಸಿಗೆ ಬಂತು. ಚಂದ್ರ ರಾಮುವನ್ನು ಬಿಟ್ಟು ಇನ್ನ್ಯಾರ ಸ್ನೇಹವನ್ನೂ ಪಡೆಯಬಾರದೆಂದು ಕರಾರು ಇತ್ತು. ಚಂದ್ರ ಆದಷ್ಟುಮಟ್ಟಿಗೆ ಅದನ್ನು ಪಾಲಿಸಿಕೊಂಡೇ ಬರುತ್ತಿದ್ದಳು. ಆದರೆ ಅವನಿಗಿಂತ ಹೆಚ್ಚು ಹಣ ಸುರಿಯುವವರು ತಯಾರಿದ್ದಾಗ ರಾಮುವನ್ನು ಮರೆಯದೆ ಇನ್ನೇನು. ಅವನಿಗೂ ಇವಳ ಆಟವೆಲ್ಲಾ ಬರೀ ಬೂಟಾಟಿಕೆ ಎಂದು ಹೊಳೆಯುತ್ತಾ ಬಂದಿತು.

ರಾಮುವಿನ ಪಾಡೇ ಹೀಗಿರುವಾಗ ಅನಂತಯ್ಯನನ್ನು ಲಕ್ಷ್ಯ ಮಾಡುವವರಾದರೂ ಯಾರು? ಕೊನೆಗೆ ಒಂದು ದಿನ ಅನಂತಯ್ಯನಿಗೆ ಮಂಗಳಾರತಿಯೂ ಆಯಿತು. ತಮ್ಮ ಮನೆಯಲ್ಲೇನೂ ಕೆಲಸವಿಲ್ಲವೆಂಬುದಾಗಿ ಹೇಳಿ ಕಳುಹಿಸಿದರು.

ಅನಂತಯ್ಯನ ಮನಸ್ಸು ಕುದಿಯ ತೊಡಗಿತು. ಚಂದ್ರಳ ಮನೆಯಿಂದ ತಿರಸ್ಕರಿಸಲ್ಪಟ್ಟು, ಗುಲಾಬಿಯ ಮನೆಯನ್ನು ಹೊಕ್ಕ. ಅವಳಿಗೆ ಅನಂತಯ್ಯನ ಮೇಲೆ ಕೋಪವಿದ್ದರೂ, ರಾಮುವಿನ ಸಂಬಂಧವು ದೊರೆಯಬಹುದೆಂದು ಭಾವಿಸಿ ಸ್ವಾಗತಿಸಿದಳು.

'ರಾಯರಿಗೆ ನಾವಿನ್ನೂ ಬದುಕಿದ್ದೇವೆ ಎಂಬ ಜ್ಞಾಪಕ ಈಗ ಬಂತೇನೋ ..'

'ಇಲ್ಲಾ ಗುಲಾಬಿ... ನಿನ್ನನ್ನು ಮರೆಯುತ್ತೇನೆಯೇ ?'

'ಪಾಪ ಅಲ್ಲವೇ; ರಾಜಮ್ಮ , ಚಂದ್ರ ಇವರೆಲ್ಲಾ ಇರುವಾಗ ನಾವೆಲ್ಲಾ ಎಲ್ಲಿ ನಿಮ್ಮ ಮನಸ್ಸಿಗೆ ಬರುತ್ತೇವೆ, ಹೇಳಿ'

'ಹಾಗೆಲ್ಲಾ ಮಾತನಾಡಬೇಡ ಗುಲಾಬಿ ... ಅವಳನ್ನು ಮೆಚ್ಚಿ ನಾನೇನೂ ಹೋಗಲಿಲ್ಲ .. ಪಾಪ ಬಡತನದಲ್ಲಿದ್ದಾರೆಂದು ತಿಳಿದು ನಾನೂ ರಾಯರೂ ಸ್ವಲ್ಪ ಸಹಾಯ ಮಾಡಿದರೆ ಕೊನೆಗೆ ಸಹಾಯ ಮಾಡಿದೋರನ್ನೇ ಮರೆತು ಬಿಡೋದೇ ?'

'ಹೌದು ಹೌದು, ಚಂದ್ರ ಮೊದಲಿನ ಚಂದ್ರ ಅಲ್ಲ.... ಅದು ಸರಿ, ನೀವೊಬ್ಬರೇ ಬಂದಿರಲ್ಲಾ; ರಾಯರನ್ನೇಕೆ ಕರೆದುಕೊಂಡು ಬರಲಿಲ್ಲ ...'

'ಮೊದಲು ರಾಯಭಾರಿ, ಆಮೇಲೆ ರಾಜ ಅಲ್ಲವೇ ? ಬರುವುದು ?'

'ಸರಿ, ಸರಿ, ಈಗ ತಿಳಿಯಿತು.... ನಮ್ಮ ಕಾಂತೂನ ಈಚೆಗೆ ನೋಡಿಲ್ಲಾ' ಅಂತ ಕಾಣುತ್ತೆ. ಎಷ್ಟು ಚೆನ್ನಾಗಿ ಹಾಡುವುದನ್ನ ಕಲಿತಿದ್ದಾಳೆ ಗೊತ್ತೇ ರಾಯರೇ ?'

'ಹಾಗೇನೂ ...'

ಗುಲಾಬಿ ಮೆಲ್ಲನೆ ಕಾಂತೆಯನ್ನು ಕೂಗಿದಳು. ಅವಳು ಬಂದೊಡನೆಯೇ 'ಕಾಂತೂ ಒಂದು ಹಾಡನ್ನು ಹೇಳಮ್ಮಾ ರಾಯರು ಕೇಳಬೇಕೆಂದಿದ್ದಾರೆ' ಎಂದು ನುಡಿದಳು. ಕಾಂತೆ ವಯ್ಯಾರದಿಂದ ಎರಡು ನುಡಿಗಳನ್ನು ಹಾಡಿದಳು.

'ಬೇಕ ಮಂಗಲದ ರಂಗಪ್ಪನ, ತರಪೇತು' ಎಂದಳು.

ತಪ್ಪಿ ಹೋಗಿದ್ದ ಅವರ ಸಂಬಂಧ ಹಾಡು ಮುಗಿಯುವುದರೊಳಗಾಗಿ ಪುನಃ ಕೂಡಿಕೊಂಡಿತು.

ಚಂದ್ರ ರಾಮುವಿನ ಮಾತನ್ನು ಸಂಪೂರ್ಣವಾಗಿ ನಿರ್ಲಕ್ಷಿಸುತ್ತಾ ಬಂದಳು. ಮೊದಲು ಅವನಿಗೆ ಇದರ ಗುಟ್ಟು ತಿಳಿಯಲಿಲ್ಲ. ತಾನು ಹೋದ ಹೊತ್ತಿನಲ್ಲಿ ಚಂದ್ರ ಮನೆಯಲ್ಲಿರುತ್ತಿರಲಿಲ್ಲ. ಹಿಂದೊಂದು ದಿನ ಇವನು ಮನೆಯ ಹತ್ತಿರ ಹೋಗುವ ಹೊತ್ತಿಗೂ ಅಲ್ಲಿಂದ ಕಾರು ಹೋಗುವ ಹೊತ್ತಿಗೂ ಸರಿಹೋಯಿತು. ಚಂದ್ರ ಮನೆಯ ಜವಾನಿಯನ್ನು ವಿಚಾರಿಸಿ

ದ್ದಾಗ, ಕಾರಿನಲ್ಲಿ ಅಮ್ಮಾವ್ರು ಒಬ್ಬರೇ ಹೊರಟರು ಎಂದು ಹೇಳಿದ್ದಳು. ಮಾರನೆಯ ದಿನ ಚಂದ್ರಳನ್ನು ವಿಚಾರಿಸಿದಾಗ ತಾನು ಒಬ್ಬ ಸ್ನೇಹಿತಳ ಮನೆಗೆ ಹೋಗಿದ್ದಳೆಂಬುದಾಗಿ ಉತ್ತರವಿತ್ತಿದ್ದಳು.

ಆದರೆ ಅವನು ಬಂದ ವೇಳೆಯಲ್ಲಿ ಎಷ್ಟೋ ಸಲ ಅವಳು ಮನೆಯಲ್ಲಿರುತ್ತಿರಲಿಲ್ಲ. ಕೊನೆಗೆ ಒಂದು ದಿನ ಜವಾನಿಯನ್ನು ಕೂಗಿ ಚಂದ್ರ ಎಲ್ಲಿ ಹೋಗಿದ್ದಾಳೆ ಎಂದು ಗಡುಸಾಗಿ ಪ್ರಶ್ನಿಸಿದ. ಅದಕ್ಕೂ ತನಗೆ ಗೊತ್ತಿಲ್ಲವೆಂಬ ಉತ್ತರವೇ ದೊರಕಿತು. ಜೋರು ಮಾಡಿದರೆ ಸಾಗುವುದಿಲ್ಲವೆಂದು ಬಗೆದು ರಾಮು ಅವಳಿಗೆ ಒಂದು ರೂಪಾಯಿ ಇತ್ತು; 'ನಿಜ ನುಡಿ, ಅವಳು ನಿತ್ಯವೂ ಎಲ್ಲಿ ಹೋಗುತ್ತಾಳೆ' ಎಂದು ಕೇಳಿದ.

'ನಾನು ಹೇಳಿದೇಂತ ಹೇಳಬೇಡಿ ಸ್ವಾಮಿ. ನಿತ್ಯ ಒಬ್ಬ ಮದರಾಸಿ ಬಂದು ಅಮ್ಮಾವ್ರನ್ನ ಕರೆದುಕೊಂಡು ಹೋಗುತ್ತಾನೆ ... ಇನ್ನೇನು ಮನೆಗೆ ಬರುವ ಹೊತ್ತು' ಎಂದಳು ಜವಾನಿ.

ಅವನ ಮೈಯೆಲ್ಲಾ ಕಿಡಿಕಿಡಿಯಾಯಿತು ಕೇಳಿದಷ್ಟು ಹಣ ಸುರಿದರೂ ನನಗಿಂತ ಆ ಮದ್ರಾಸಿಗಳು ಹೆಚ್ಚಾದರೋ ಎಂದು ಮನಸ್ಸಿನಲ್ಲೇ ಅಂದುಕೊಂಡ. ಕೋಪ ಉಕ್ಕಿ ಬಂತು. ಆಕೆ ಬರುವವರಿವಿಗೂ ಅಲ್ಲಿಯೇ ಶಥಪಥ ತಿರುಗ ಹತ್ತಿದನು. ಸ್ವಲ್ಪ ಹೊತ್ತಿನ ನಂತರ ಮನೆಯ ಮುಂದೆ ಒಂದು ಕಾರು ಬಂದು ನಿಂತಿತು. 'ಓಹೋ! ರಾಯರು ಬಂದು ಹೊತ್ತಾಯಿತೇನೋ?' ಎಂದು ನಗುತ್ತಾ ರಾಜಮ್ಮ ಒಳಗೆ ಹೋದಳು. ಕೂಡಲೇ ಚಂದ್ರಳೂ ಬಂದಳು. 'ಎಲ್ಲಿಗೆ ಹೋಗಿದ್ದೆ?' ಎಂದು ರಾಮು ಗದರಿಸಿ ಕೇಳಿದನು. ಅದಕ್ಕೆ 'ಎಲ್ಲಿಗೋ' ಎಂಬ ಉತ್ತರ ಬಂತು.

'ನನಗೂ ತಿಳಿಯಿತು. ಯಾವೋನೋ ಆ ಮದ್ರಾಸಿ' ಎಂದು ಕೂಗಾಡಿದ. ಬಾಗಿಲ ಕಡೆ ತಿರುಗಲು ಕಾರಿನಲ್ಲಿ ಕುಳಿತಿದ್ದ ಮದ್ರಾಸಿನವನ ಮುಖ ರಾಮುವಿಗೆ ಕಾಣಬಂದಿತು. ಕೂಡಲೇ 'ಎನೇ....ಆ ಸೂಳೇಮಗನ ಹತ್ತಿರ ಇಷ್ಟೊತ್ತೂ ಲೀಲೆ ಆಡುತ್ತಿದ್ದೆಯೋ?' ಎಂದ.

ಅಷ್ಟು ಹೊತ್ತಿಗೆ ಒಳಗಿನಿಂದಲೇ ಈ ಸಂಭಾಷಣೆಯನ್ನು ಆಲಿಸುತ್ತಿದ್ದ ರಾಜಮ್ಮ ಗಲಾಟೆಯಾಗುವುದೆಂದು ಬಗೆದು 'ಹೌದು....ಅವರು ಬಹಳ ಹಳಬರು....ಈ ಊರಿಗೆ ಬಂದಾಗಲೆಲ್ಲ ನಮ್ಮ ಮನೆಗೆ ಬರುತ್ತಾರೆ' ಎಂದಳು.

'ಅವರು ಬಹಳ ಹಿಂದಿನ ಪರಿಚಯ ನಮಗೆ' ಎಂದು ಚಂದ್ರಳೂ ಮಾತು ಸೇರಿಸಿದಳು.

ಕೋಪದಿಂದ ರಾಮು ತನ್ನನ್ನೇ ತಾನು ಮರೆತನು. 'ಅವನದು ಹಿಂದಿನ ಪರಿಚಯ. ನನ್ನದು ನೆನ್ನೆಯಿಂದ ಪರಿಚಯ. ಇನ್ನೊಬ್ಬನದು ಇನ್ನೊಂದು ದಿನದಿಂದ ಪರಿಚಯ' ಎಂದು ಹಲ್ಲು ಕಚ್ಚಿ 'ದರಿದ್ರ ಮುಂಡೆ' ಎನ್ನುತ್ತಾ ಎಡಗಾಲಿನಿಂದ ಒದ್ದನು. 'ಏನು ರಾಮಪ್ಪಾ ಇದು' ಎನ್ನುತ್ತಾ ಬಂದು ರಾಜಮ್ಮ ಅಡ್ಡ ನಿಂತಳು. ಅವಳಿಗೂ ಚೆನ್ನಾಗಿ ಎರಡು ಏಟುಗಳನ್ನು ಬಿಗಿದನು.

ತಾಯಿ ಮಗಳ ಕೂಗಾಟವನ್ನು ಕೇಳಿ ಕಾರಿನಲ್ಲಿಯೇ ಕುಳಿತಿದ್ದ ಮದ್ರಾಸಿನವನು ವಿಸ್ಮಯದಿಂದ ಕಾರಿನಿಂದಿಳಿದು ಬಂದ. ಅವನನ್ನು ನೋಡಿದ ಕೂಡಲೇ ರಾಮುವಿನ ಸಿಟ್ಟು ಅಸಾಧ್ಯವಾಯಿತು. ರಾಜಮ್ಮನನ್ನೂ ಒಂದು ಪಕ್ಕಕ್ಕೆ ನೂಕಿ ಚಂದ್ರಳಿಗೆ ಪಟಪಟನೆ ಚೆನ್ನಾಗಿ ಹೊಡೆದನು. ಚಂದ್ರ ಏಟು ತಾಳಲಾರದೆ 'ಅಯ್ಯೋ ಎಂದು ಅರಚಿದಳು. ಅವಳ ಗೋಳಾಟವನ್ನು ನೋಡದೆ ಆ ಮದ್ರಾಸಿನವನು ಮುಂದೆ ಬಂದು 'ಎನ್ನ ಸಾರ್, ಇದಿ ರೊಂಬಾ ಗಲಾಟಾ' ಎಂದು ನಡುವೆ ಬಾಯಿಹಾಕಿದ. ಏನೂ ಅರ್ಥವಾಗದೆ 'ಗಲಾಟ ತಥ್' ಎನ್ನುತ್ತಾ ಮನೆಯಿಂದ ಹೊರಬಿದ್ದನು.

ಸಮಯವನ್ನೇ ಕಾಯುತ್ತಿದ್ದ ಅನಂತಯ್ಯ ಉಪಾಯದಲ್ಲಿ ರಾಮಪ್ಪನನ್ನು ಗುಲಾಬಿಯ ಮನೆಗೆ ಕರೆದೊಯ್ದನು. ರಾಮೂಗೆ ಅವನ ಮೇಲೆ ವಿಪರೀತ ಕೋಪ ಉಂಟಾಯಿತು. ಚಂದ್ರಳಂಥ ನೀಚಳ ಸಹವಾಸ ಮಾಡಿಸಿದನಲ್ಲಾ ಎಂದು. ಆದರೆ ಅವನು ಕಾಂತೆಯ ರೂಪಗಾನಮಾಡಿದ ಮೇಲೆ ತೆಪ್ಪಗೆ ಅವನ ಹಿಂದೆ ಹೊರಟ.

ಗುಲಾಬಿಗೆ ರಾಮು ಬಂದದ್ದು ಪರಮಾನಂದವಾಯಿತು. ಅವನನ್ನು ಸಂತೋಷದಿಂದ ಸ್ವಾಗತಿಸಿದಳು. ಅವನ ಮುಖದಿಂದ ಕೋಪವಿನ್ನೂ ಇಳಿದಿರಲಿಲ್ಲ. ಗುಲಾಬಿಯೇ ಕಾಂತೂ, ರಾಯರು ಕಾದು ಕುಳಿತಿದ್ದಾರೆ ಎಂದು ಕೂಗಿದಳು. ಕೂಡಲೇ ಒಂದು ಕೈಯಲ್ಲಿ ವೀಳೆಯದೆಲೆಯ ತಟ್ಟೆಯನ್ನೂ ಇನ್ನೊಂದು ಕೈಯಲ್ಲಿ ಹಾಲಿನ ಲೋಟವನ್ನೂ ಹಿಡಿದುಕೊಂಡು ಬಂದಳು. ಅವಳನ್ನು ನೋಡಿದ ಕೂಡಲೇ ರಾಮು ಜಗತ್ತನ್ನೇ ಮರೆತ. ಸುಖದಲ್ಲಿ

ಬೆಳೆದಿದ್ದ ಹಸನಾದ ಶರೀರ. ಎಳೆಗೆಂಪಿನ ಮೈಬಣ್ಣ. ಅದಕ್ಕೊಪ್ಪು ವಂತೆ ಉಟ್ಟಿದ್ದ ತೆಳ್ಳನೆಯ ರೋಜಾ ಬಣ್ಣದ ಸೀರೆ, ದೇಹದ ಸುಂದರ ಮಾಟವನ್ನು ಇನ್ನೂ ಹೆಚ್ಚಿಸುವಂತಿತ್ತು. ಕಾಂತೆಯ ಆ ಚಂಚಲ ಪೂರಿ ತವಾದ ಕಣ್ಣುಗಳು ಯಾವ ಅರಸಿಕನನ್ನಾದರೂ ಅಸ್ತವ್ಯಸ್ಥನನ್ನಾಗಿ ಮಾಡುವ ಶಕ್ತಿ ಪಡೆದಿದ್ದವು. ಅಂತೆಯೇ ಆ ಮುಂಗುರುಳುಗಳೂ, ನೀಳ ವಾದ ಮೂಗು, ಅದರ ಎಡಬಲದಲ್ಲಿ ಕೆತ್ತಿದ ರತ್ನದ ನತ್ತೂ, ನಗೆಯನ್ನು ಚೆಲ್ಲುತ್ತಿದ್ದ ಆ ತುಟಿಗಳೂ ರಾಮುವನ್ನು ಸ್ಥಂಭೀಭೂತನನ್ನಾಗಿ ಮಾಡಿ ದವು. ಕಾಂತೆ ರಾಮು ಹತ್ತಿರ ಸರಿಯುತ್ತಲೂ ಅನಂತಯ್ಯನೂ ಗುಲಾ ಬಿಯೂ ಹೊರಗೆ ಸರಿದರು.

ಇಬ್ಬರೂ ಬಾಗಿಲಿಗೆ ತಮ್ಮ ಕಿವಿಯನ್ನು ಕೊಟ್ಟು ಒಳಗಿನ ಸಂಭಾ ಷಣೆಯನ್ನು ಕುತೂಹಲದಿಂದ ಆಲಿಸಿದರು. ಅನಂತರ ಅನಂತಯ್ಯನು ನಕ್ಕನು. ' ಗುಲಾಬಿ, ಎಲ್ಲವೂ ಸರಿಹೋದವು.'

ಗುಲಾಬಿಯೂ ಮರುತ್ತರವಾಗಿ ನಕ್ಕಳು.

× × × ×

ಆದರೆ ಅನಂತಯ್ಯನ ಕಾಲಗತಿಯು ಕೆಡುತ್ತಾ ಬಂದಿತ್ತು. ಕಾಂ ತೆಯ ಪರಿಚಯವಾದ ಮೇಲೆ ರಾಮುವೂ ಅವನನ್ನು ತಿರಸ್ಕಾರ ಮಾಡ ಹತ್ತಿದ. ಇದಕ್ಕೆ ಗುಲಾಬಿಯೂ ಶಾಂತಯ್ಯರಿಬ್ಬರೂ ಕಾರಣರಾಗಿದ್ದರು. ಅವಳಿಗೆ ಅವನ ಮೇಲೆ ಸೇಡು ತೀರಿಸಿಕೊಳ್ಳಲು ಇದೊಂದೇ ಮಾರ್ಗ ವಾಗಿತ್ತು. ಅಂತೆಯೇ ಅವನ ಮೇಲೆ ಇಲ್ಲದ್ದನ್ನೆಲ್ಲಾ ಹೇಳಿ ರಾಮುವಿನ ಮನಸ್ಸನ್ನು ಕೆಡಿಸಿದಳು. ಶಾಂತಯ್ಯನೂ ಅವನ ಮೇಲೆ ಚಾಡಿ ಹೇಳು ತ್ತಿದ್ದ. ಅವನು ಆಗಾಗ್ಗೆ ಲೆಖ್ಖದ ವಿಚಾರದಲ್ಲಿ ತಲೆಹಾಕುತ್ತಿದ್ದುದರಿಂ ದಲೇ ಶಾಂತಯ್ಯನಿಗೆ ಅವನ ಮೇಲೆ ಕೋಪ.

ಅನಂತಯ್ಯನ ವರಮಾನಕ್ಕೆ ಬಹಳ ಅಡಚಣೆಗಳು ಬರತೊಡಗಿ ದವು. ಮಿಲ್ಲಿನ ಲೆಖ್ಖವೆಲ್ಲಾ ಶಾಂತಯ್ಯನ ಕೈಯಲ್ಲಿದ್ದುದರಿಂದ ಕಾಸನ್ನು ಕಸಿಯುವುದು ಸ್ವಲ್ಪ ಕಷ್ಟವಾಗುತ್ತಿತ್ತು. ಈ ಮಧ್ಯೆ ಇವನು ಇದ್ದ ರೂಮಿನ ಮಾಲೀಕ ಹಳೆಯ ಬಾಕಿ ಬಾಡಿಗೆಗೆ ಒತ್ತಾಯಪಡಿಸಿದ. ರೂಮಿಗೆ ಹೋದರೆ ತಾನೇ ಈ ತಾಪತ್ರಯವೆಂದು, ಗುಲಾಬಿಯ ಮನೆಯಲ್ಲಿಯೇ

ಇರಲು ಪ್ರಾರಂಭಿಸಿದ. ಆಕೆ ಒಂದೆರಡು ದಿನ ಹೇಳುವಷ್ಟು ಹೇಳಿದಳು, ಅನಂತರ ನಿರ್ದಾಕ್ಷಿಣ್ಯವಾಗಿ, ಮನೆ ಬಿಟ್ಟು ಹೊರಡಬೇಕೆಂದಳು. ಅಷ್ಟೂ ಅಲ್ಲದೆ ಕಳುವಾಗಿದ್ದ ಹದಿನೈದು ರೂಪಾಯಿಗಳಿಗೆ ಅವನೇ ಕಾರಣನೆಂದು ರಾಮುಪ್ಪನಿಗೆ ತಿಳಿಯುತ್ತಲೂ ತನ್ನ ಮನೆಗೆ ಅವನು ಬರಕೂಡದೆಂದೂ ಆಜ್ಞೆ ಮಾಡಿದನು. ಅತ್ತ ಅಕ್ಕನ ಮನೆಗೆ ಹೋಗಲೂ ಸಾಕಷ್ಟು ಧೈರ್ಯ ಏರಲಿಲ್ಲ.

ಇವೆಲ್ಲದರ ಜೊತೆಗೆ ಅವನ ದೇಹಾರೋಗ್ಯವೂ ಕೆಡುತ್ತಾ ಬಂತು. ಹಿಂದಿನಿಂದಲೂ ಕೂಡಿಹಾಕಿ ಕೊಂಡಿದ್ದ ಆ ಕೆಟ್ಟ ರೋಗ ಒಮ್ಮೆಲೆ ಉಗ್ರ ವಾಗಿ ಪರಿಣಮಿಸಿತು. ಆ ಖಾಯಿಲೆಗೆ ಬಹಳ ಖರ್ಚು ಮಾಡಬೇಕಾ ಗಿತ್ತು. ನರಳುತ್ತಾ ಮನೆಗೆ ಬಂದ ಅನಂತಯ್ಯನನ್ನು ಗುಲಾಬಿ ಚೆನ್ನಾಗಿ ಬೈದು ಹೊರಗೆ ಅಟ್ಟಿದಳು. ಅಲ್ಲಿಯೇ ಇದ್ದ ರಾಮು, ತನ್ನ ಮನೆಗೆ ಅನಂತಯ್ಯನೇನಾದರೂ ಬಂದರೆ ಕತ್ತು ಹಿಡಿದು ನೂಕಿಸುವದಾಗಿ ಹೇಳಿದ.

ಎಲ್ಲಿಯಾದರೂ ನಾಲ್ಕಾರು ದಿನಗಳನ್ನು ಕಳೆಯಲು ಆಸರೆ ಹುಡು ಕಲೇ ಬೇಕಾಯಿತು ಅನಂತಯ್ಯ. ಕೊನೆಗೆ ಇದ್ದದ್ದು ಅವನ ಅಕ್ಕನ ಮನೆ ಒಂದೇ. ಅಲ್ಲಿಗೇನೇ ಧೈರ್ಯ ಮಾಡಿಕೊಂಡು ಹೋದ.

ಪಾರ್ವತಮ್ಮ ತಮ್ಮ ಮನೆಯ ಎರಡು ಕೋಣೆಯಲ್ಲಿಯೇ ತಮ್ಮ ಸಂಸಾರ ರಥವನ್ನು ಸಾಗಿಸುತ್ತಿದ್ದರು. ಅವರ ಮನೆಯಿಂದ ಬರುತ್ತಿದ್ದ ಬಾಡಿಗೆಗೆ ಸರಿಯಾಗಿ ತಮ್ಮ ಸಂಸಾರದ ಖರ್ಚನ್ನೂ ಸರಿಮಾಡುವುದರಲ್ಲಿ ಅವರ ಜೀವ ಹಣ್ಣಾಗುತ್ತಿತ್ತು. ಒಡವೆಗಳೆಲ್ಲಾ ಆಗಲೇ ಬೇರೆ ಹಾದಿ ಯನ್ನು ಹಿಡಿದಿದ್ದವು. ಒಂದು ಡಾಬು ಮತ್ತು ಮಿಕ್ಕ ಒಂದೆರಡು ಚಿಲ್ಲರೆ ಒಡವೆಗಳು ಮಾತ್ರ ಅವರಲ್ಲಿ ಇನ್ನೂ ಉಳಿದಿದ್ದವು. ಅಂತಹುದರಲ್ಲಿಯೂ ಸೀತಾಲಕ್ಷ್ಮಿಯ ಪೋಷಣೆಯನ್ನು ತಾವೇ ಹೊತ್ತಿದ್ದರು. ಇಂತಹ ಪರಿ ಸ್ಥಿತಿಯಲ್ಲಿ, ಅನಂತಯ್ಯ ಅವರನ್ನು ಬಂದು ಸೇರಿಕೊಂಡ.

ತನ್ನ ಅಕ್ಕನ ಮನೆಗೆ ಬರುವುದರೊಳಗಾಗಿಯೇ ಅವನ ಕಾಹಿಲೆಯು ಉಗ್ರವಾಗಿ ಪರಿಣಮಿಸಿತ್ತು. ಮೈಮೇಲೆ ಅನೇಕ ಕಡೆ ಗುಳ್ಳೆಗಳು ಬಾತು ಕೊಂಡವು. ಮುಖವಂತೂ ಸುಟ್ಟ ಬದನೆಕಾಯಿಯ ಹಾಗೆ ಆಗಿತ್ತು. ಕಾಹಿಲೆ ಎಂತಹದೆಂದು ತಿಳಿಯುವುದು ಪಾರ್ವತಮ್ಮನವರಿಗೆ ಕಷ್ಟವಾಗ

ಲಿಲ್ಲ. 'ಅಯ್ಯೋ! ಅನಂತೂ ಇವೆಲ್ಲಾ ಪೂರ್ವ ಪುಣ್ಯದ ಫಲವಪ್ಪಾ. ಅನುಭವಿಸಬೇಕಪ್ಪಾ;' ಎಂದು ಮನೆಯ ಒಂದು ಮೂಲೆಯಲ್ಲಿಯೇ ಹಾಸಿಗೆ ಹಾಸಿ ಮಲಗಿಸಿದರು. ಒಳಗೆ ಹೋಗಿ ಗಂಜಿಯನ್ನು ಮಾಡಿ ತಂದು ಕುಡಿಸಿದರು.

ಅವನ ಗೋಳು ಅಸಾಧ್ಯವಾಗಿದ್ದಿತು. ಹಿಂದೆ ಪಟ್ಟ ಸುಖವೆಲ್ಲವೂ ಈಗ ಹಾಸ್ಯಮಾಡಿ ಅವನನ್ನು ಅಣಕಿಸುವಂತೆ ಭಾಸವಾಗುತ್ತಿತ್ತು. 'ಅಯ್ಯೋ ಪಾತಿ, ನಿನ್ನ ಮಾತು ಕೇಳಲಿಲ್ಲ ಕಣೇ.. ಈ ಸಂಕಟ ತಡಿಯ ಲಾರೇ! ದೇವರೇ ನನ್ನ ಬೇಗನೇ ಸಾಯಿಸಪ್ಪ' ಎಂದು ಕೂಗಾಡಲು ಪ್ರಾರಂಭಿಸಿದನು.

ಮೊದಲು ಏನು ಮಾಡಬೇಕೆಂಬುದೇ ಪಾರ್ವತಮ್ಮನವರಿಗೆ ತಿಳಿಯ ಲಿಲ್ಲ. ನೆರೆಯ ಶೆಟ್ಟರಿಂದ ಕೆಲವು ರೂಪಾಯಿಗಳನ್ನು ಎರವು ತಂದು ಎದುರಿನಲ್ಲಿದ್ದ ಡಾಕ್ಟರ ಕಾಲಿಗೆ ಬಿದ್ದು ಔಷಧಿಯನ್ನು ಕೊಡಬೇಕೆಂದು ಬೇಡಿಕೊಂಡರು. ಡಾಕ್ಟರ್ ಬಂದು ನೋಡಿದರು. ಅದು ಕೆಟ್ಟ ಖಾಯಿಲೆ. ಉಗ್ರ ಸ್ಥಿತಿಗೆ ಬಂದು ಬಿಟ್ಟಿತ್ತು. ಹಗಲು ರಾತ್ರೆಯೆನ್ನದೆ ಅನಂತು ವಿನ ಮಗ್ಗುಲಲ್ಲೇ ಕುಳಿತು ಅವನ ಶಿಶ್ರೂಷೆ ಪಾರ್ವತಮ್ಮನವರು ಮಾಡಿ ದರು. ಪಾರ್ವತಮ್ಮನವರ ತ್ಯಾಗವೆಲ್ಲಾ ವ್ಯರ್ಥವಾಯಿತು. ಹತ್ತು ದಿನಗಳ ಕಾಲ ಒಂದೇ ಸಮನೆ ನರಳಿ ಅನಂತಯ್ಯ ಕಣ್ಣು ಮುಚ್ಚಿದ.

ಪಾರ್ವತಮ್ಮನವರು ಅಯ್ಯೋ ನನ್ನ ಬಾಳೇ, ನಾನು ಮಾಡಿದ ಕೆಲಸವೆಲ್ಲಾ ಹಾಳೇ ಆಗುತ್ತಿದೆಯಲ್ಲಾ; ಇನ್ನೂ ಎಷ್ಟು ದುಃಖ ಅನುಭ ವಿಸಬೇಕೋ ಎಂದು ಮಂಕು ಬಡಿದವರಂತೆ ಮೂಲೆಯಲ್ಲಿ ಕುಳಿತರು.

ರಂಗಯ್ಯಶೆಟ್ಟರ ಸಹಾಯದಿಂದ ಅನಂತುವಿನ ದೇಹ ಸಂಸ್ಕಾರವು ಸುಲಭದರಲ್ಲಿಯೇ ಮುಗಿಯಿತು.

## ಹತ್ತು

ಅನಂತಯ್ಯನ ಮರಣಾನಂತರ ಮಿಲ್ಲಿನಲ್ಲಿ ಶಾಂತಯ್ಯನ ಅಧಿಕಾ ರವೇ ಹೆಚ್ಚಾಯಿತು. ಅವನು ಸತ್ತಾಗ ಪಾರ್ವತಮ್ಮನವರ ಮನೆಗೆ ಶಾಂತಯ್ಯ ಹೋಗಿದ್ದ. ತುಂಬು ಯೌವನದಿಂದ ತುಳುಕುತಿದ್ದ ಭಾಗ್ಯ

ಳನ್ನು ನೋಡಿ ಆಗಲೇ ಅವನ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು. ರಾಮು ಹತ್ತಿರ ಮಾತನಾಡುತ್ತಿದ್ದಾಗ ಮೆಲ್ಲಗೆ ಭಾಗ್ಯಳ ಹೆಸರನ್ನೆತ್ತುತ್ತಿದ್ದ. ಅದಕ್ಕೆ ರಾಮು, ಶಾಂತಯ್ಯ ಆ ಬಜಾರಿ ಮಾತನ್ನೆತ್ತ ಬೇಡ ಎನ್ನುತ್ತಿದ್ದ.

'ಅದಕ್ಕಲ್ಲಾ ರಾಮಪ್ನೋರೆ; ಆ ಹುಡುಗಿಗೆ ಮದುವೆ ಗಿದುವೆ ಮಾಡೋಲ್ವಾ . . .'

'ಅದನ್ಯಾರು ಮಾಡ್ಕೋಳ್ಳೋರು . . . ಬೆಳೆದು ನಿಂತಿದ್ದಾಳೆ. ಚಿಕ್ಕ ಪುಟ್ಟ ಹುಡುಗಿ ಅಂದರೇನೋ ಅನ್ನಬಹುದು . . . ಯಾರು ಮಾಡ್ಕೋ ಳ್ಳೋರು ಅವಳನ್ನ'

'ಹಾಗಾದರೆ ಮುಂದೆ ಗತಿ'

'ನೀನೇ ಹಿಂದೆ ಹೇಳಿದ್ದೇ ಅಲ್ಲವೆ . . . ಮುಂದಿನ ಗತಿ ಗೊತ್ತಿದೆ ಯಲ್ಲಾ . . .' ಎಂದು ವ್ಯಂಗ್ಯವಾಗಿ ನಕ್ಕನು. ಶಾಂತಯ್ಯನಿಗೂ ಅರ್ಥ ವಾಯಿತು. ಅವನೂ ಜೋರಾಗಿ ನಕ್ಕುಬಿಟ್ಟ.

ಶಾಂತಯ್ಯ ಭಾಗ್ಯಳ ಪರಿಚಯಕ್ಕಾಗಿ ಬಹಳ ಆಸೆ ಪಟ್ಟ. ನಿಜ. ಚಿಕ್ಕವಳಾಗಿದ್ದಾಗ ಭಾಗ್ಯಳನ್ನು ತಾನೇ ಎತ್ತಿ ಆಡಿಸಿದ್ದ. ಆದರೆ ಅವಳ ಈಗಿನ ದೇಹರೂಪಕ್ಕೆ ಮರುಳಾಗಿ ಅದನ್ನೆಲ್ಲಾ ಮರೆತಿದ್ದ.

ಮಿಲ್ಲಿನ ಯಾವುದೋ ಒಂದು ಹಳೆಯ ವಿಚಾರವನ್ನೇ ಕಾರಣವಾ ಗಿಟ್ಟುಕೊಂಡು ಪಾರ್ವತಮ್ಮನವರ ಮನೆಗೆ ಹೋದ. ಅವನನ್ನು ನೋಡಿ, 'ಏನಪ್ಪಾ ಶಾಂತಯ್ಯ; ನಮ್ಮ ಮನೆ ಕಡೆ ಬರಲು ದಾರಿ ಸಿಕ್ಕಿತೇನಪ್ಪಾ' ಎಂದರು.

'ಏನು ಪಾರ್ವತಮ್ಮನವರೇ ಹೀಗೆ ಹೇಳುತ್ತೀರಾ . . . ಬಹಳ ಇಳಿದು ಹೋಗಿದ್ದೀರಲ್ಲಾ ? ಏನು ನಿಮ್ಮ ದೇಹದ ಸ್ಥಿತಿ ಚೆನ್ನಾಗಿಲ್ಲವೇ ?'

'ಏನೋ ಯೋಚನೆಗಳು ಇರುತ್ತವಲ್ಲಾ . . . ನಾನು ನಿಜವಾಗಿಯೂ ಅನಂತು ಇಷ್ಟು ಬೇಗನೆ . . .' ಎಂದು ಕಣ್ಣಿನ ತೇವವನ್ನು ಒರಸಿ ಕೊಂಡರು.

'ಸುಮ್ಮನೆ ಯಾಕೆ ಅದನ್ನೆಲ್ಲಾ ಯೋಚಿಸುತ್ತೀರಿ . . .' ಎಂದನು.

ಒಂದು ಸ್ವಲ್ಪ ಹೊತ್ತಾದನಂತರ 'ರಾಮು ಚೆನ್ನಾಗಿದ್ದಾನೇನಪ್ಪಾ' ಎಂದು ವಿಚಾರಿಸಿದರು.

'ರಾಮುಪ್ನೋರಾ . . . ಚೆನ್ನಾಗಿದ್ದಾರೆ. ಏನೇ ಹೇಳಿ ನೀವು, ಬಲು ಕೋಪ ಅವರದ್ದು ಅವ್ನಾವ್ರೇ' ಎಂದು ಗಿಲೀಟು ಮಾತನ್ನಾಡಿದ.

'ಏನೋ ಪಾಪ ಹುಡುಗ. ಇನ್ನೊಂದು ಸ್ವಲ್ಪ ಅನುಭವವಾದರೆ ಎಲ್ಲಾ ಸರಿಹೋಗುತ್ತದೆ' ಎಂದರು. ರಾಮುವಿನ ವಿಚಾರ ಪಾರ್ವತಮ್ಮ ನವರಿಗೆ ಒಂದು ದೊಡ್ಡ ಸಮಸ್ಯೆಯಾಗಿತ್ತು. ಆದರೂ ಮನಸ್ಸಿಗೆ ಬಂದ ಅಧೀರತೆಯನ್ನು ತೋರಿಸದೆ; ಶಾಂತಯ್ಯ ಬಂದ ಸಮಾಚಾರವೇನೆಂದು ಕೇಳಿದರು.

'ಏನೂ ಇಲ್ಲಾ ; ಈ ಕಾಗದಕ್ಕೆ ನಿಮ್ಮ ಸಹಿ ಆಗಬೇಕಾಗಿತ್ತು' ಎಂದು ಹೇಳಿ ಅವರ ಕೈಯಿಂದ ಸಹಿಯನ್ನು ಪಡೆದ. ಸೀತಾಲಕ್ಷ್ಮಿಯು ಮಗುವನ್ನೆತ್ತಿಕೊಂಡು ಬರಲು ಅದನ್ನು ಮುದ್ದಾಡಿದ.

ಆದರೂ ಅವನ ಕಣ್ಣುಗಳು ಭಾಗ್ಯಳ ಬರುವಿಕೆಯನ್ನೇ ಕಾದು ಕುಳಿತಿದ್ದವು. ಹೊರಡುವ ಸಮಯದಲ್ಲಿ 'ಭಾಗ್ಯವ್ನಾ ಎಲ್ಲಿ' ಎಂದು ಕೇಳಿದ. 'ಇವತ್ತು ಕಾಲೇಜು ಡೇ' ಆದ್ದರಿಂದ ಹೋಗಿದ್ದಾಳೆಂದು ಪಾರ್ವತಮ್ಮ ತಿಳಿಸಿದರು. ಶಾಂತಯ್ಯನಿಗೆ ಆಶಾಭಂಗವಾದರೂ ತೋರಿಸಿಕೊಳ್ಳದೆ, 'ನೀವು ಒಳ್ಳೆಯ ಕೆಲಸ ಮಾಡಿದಿರಿ. ಹುಡುಗೀನ ಓದಿಸುತ್ತಿರುವುದು' ಎಂದ. 'ಏನಾದರೂ ಮಾಡಲೇ ಬೇಕಲ್ಲಪ್ಪಾ' ಎಂದು ಪಾರ್ವತಮ್ಮ ಸುಮ್ಮನಾದರು.

ಮನೆಗೆ ಬಂದ ಶಾಂತಯ್ಯನ ಮನಸ್ಸು ಒಂದು ಸ್ಥಿಮಿತಕ್ಕೆ ಬರಲಿಲ್ಲ. ಭಾಗ್ಯಳನ್ನು ನೋಡುವ ಹುಚ್ಚು ಹೆಚ್ಚಾಯಿತು. ಇನ್ನೊಂದು ಸಲ ಭಾಗ್ಯಳ ಮನೆಗೆ ಹೋಗಲೇಬೇಕೆಂದು ಮಾರನೆಯ ದಿನ ನಿರ್ಧರಿಸಿದ. ಕೊನೆಗೆ ತಡೆಯಲಾರದೆ ಮಾರನೆಯ ದಿನ ಸಾಯಂಕಾಲ ಅವರ ಮನೆಗೆ ಪುನಃ ಹೊರಟ. ಸೀತಾಲಕ್ಷ್ಮಿ ಮನೆಯಲ್ಲಿರಲಿಲ್ಲ. ಪಾರ್ವತಮ್ಮನವರಿಗೆ ಇವನು ಬಂದದ್ದು ಕಂಡು ಆಶ್ಚರ್ಯವಾಯಿತು. ಆದರೂ ಬಾಪ್ಪಾ ಎಂದರು. 'ಇಲ್ಲೇ ಹೋಗುತ್ತಿದ್ದೆ. ಹಾಗೆಯೇ ಮಾತನಾಡಿಸಿಕೊಂಡು ಹೋಗೋಣ ಎಂದು ಬಂದೆ' ಎಂದು ದೇಶಾವರದ ನಗೆ ಬೀರಿದ. ಆ ಸಮಯಕ್ಕೆ ಸರಿಯಾಗಿ ಭಾಗ್ಯಳೂ ಬಂದಳು. ಅವಳನ್ನು ನೋಡಿದ ಅವನ ಹರ್ಷಕ್ಕೆ ಪಾರವಿಲ್ಲವಾಯಿತು. ಭಾಗ್ಯ ಎಷ್ಟು ದೊಡ್ಡವಳಾಗಿದ್ದಾಳೆ.

ಎಂದು ಅವಳಕಡೆ ಇಟ್ಟ ತನ್ನ ದೃಷ್ಟಿಯನ್ನು ತೆಗೆಯಲೇ ಇಲ್ಲ. ಪುನಃ ಅವಳನ್ನು ಉದ್ದೇಶಿಸಿ ' ಯಾವ ಇಸ್ಕೂಲು ಈಗ ' ಎಂದ.

' ಇಸ್ಕೂಲಲ್ಲಾ . . . ಇಸ್ಕೂಲು . . . ಕಾಲೇಜು ಈಗ ' ಎಂದಳು. ಭಾಗ್ಯ ಅಣಕಿಸುತ್ತ.

' ಕಾಲೇಜಾ ' ಎಂದು ಶಾಂತಯ್ಯ ಬಾಯಿಬಿಟ್ಟ. ಅವನಿಗೆ ಈ ವಿಚಾರಗಳೊಂದೂ ಬೇಕಾಗಿಯೇ ಇರಲಿಲ್ಲ. ನಿನ್ನೆಯೇ ಪಾರ್ವತಮ್ಮ ನವರು ಭಾಗ್ಯ ಕಾಲೇಜಿನಲ್ಲಿ ಓದುತ್ತಿದ್ದಾಳೆ ಎಂದು ಹೇಳಿದ್ದರು. ಬದಲು ಭಾಗ್ಯ ಮಾತನಾಡಿದ್ದೇ ಅವನಿಗೆ ಬಹಳ ಸಂತೋಷ ಉಂಟುಮಾಡಿತು.

ಅವನು ' ಕಾಲೇಜಾ ' ಎಂದಾಗ ಭಾಗ್ಯ ' ಹೂ ಊ ಊ ' ಎಂದು ದೀರ್ಘವಾಗಿ ತಾನೂ ಹೇಳಿದ್ದಳು. ಪಾರ್ವತಮ್ಮನವರು ' ಭಾಗ್ಯಾ ' ಎಂದು ತಮ್ಮ ಮಗಳನ್ನು ಗದರಿಸಿಕೊಂಡರು. ಆಗ ' ನಾನು ಮರತೇ ಬಿಟ್ಟಿದ್ದೆ ರತ್ನನಿಗೆ ಬೇಗ ಬರುತ್ತೇನೆ ಎಂದು ಹೇಳಿದ್ದೆ ' ಎಂದು ಹೇಳಿ ಭಾಗ್ಯ ಹೊರಗೆ ಹೋದಳು. ಶಾಂತಯ್ಯ ಸ್ವಲ್ಪ ಹೊತ್ತು ಕುಳಿತಿದ್ದು ಆ ಮೇಲೆ ತಾನೂ ಹೊರಟ.

ಭಾಗ್ಯಳ ವಿಷಯವಾಗಿ ಪಾರ್ವತಮ್ಮ ಯೋಚನೆ ಮಾಡುವುದನ್ನೇ ಬಿಟ್ಟು ಬಿಟ್ಟರು. ಆದರೆ ಸೀತಾ ಲಕ್ಷ್ಮಿಯ ವಿಚಾರ ಮಾತ್ರ ಅವರನ್ನು ನಿಸ್ತೇಜರನ್ನಾಗಿ ಮಾಡುತ್ತಿತ್ತು. ರಾಜಶೇಖರ ಎಲ್ಲಿಯಾದರೂ ಜೀವ ಸಹಿತ ಇದ್ದರೆ ಸಾಕೆಂದು ಚಿಂತಿಸುತ್ತಿದ್ದರು. ದೇವರಿಗೆ ಅವರು ಹೊತ್ತ ಹರಕೆಗಳೆಷ್ಟೋ !

ಒಂದು ದಿನ ರಂಗಯಶೆಟ್ಟರು ಬಂದು ' ಪಾರ್ವತಮ್ಮನವರೇ ನಾನು ಮೊನ್ನೆ ಬೊಂಬಾಯಿಗೆ ಹೋಗಿದ್ದಾಗ್ಗೆ ರಾಜಶೇಖರನನ್ನು ನೋಡಿದ್ದೆ ' ಎಂದರು.

' ನೀವು ನಿಜ ತಾನೇ ಹೇಳುತ್ತಿರುವುದು ' ಎಂದರು ಪಾರ್ವತಮ್ಮ.

' ನೋಡಿ, ಅಂಗಡಿಗೆ ಕೆಲವು ಸಾಮಾನು ತರಬೇಕಿತ್ತು, ಅದಕ್ಕೆ ಖುದ್ದಾಗಿ ನಾನೇ ಬೊಂಬಾಯಿಗೆ ಹೋಗಿದ್ದು ನಿಮಗೆ ಗೊತ್ತಿದೆಯಲ್ಲಾ ; ಆಗ ಅಲ್ಲಿ ವಿಕ್ಟೋರಿಯಾ ಟರ್ಮಿನಸ್ ಎಂದು ಇದೆ. ಅಲ್ಲಿ ಟ್ರಾಂ ಹತ್ತಿ ಒಳಗೆ ಕೂತು ನೋಡುತ್ತೇನೆ ; ಎದುರಿನ ಸಾಲಿನಲ್ಲೇ ರಾಜಶೇಖರ—ನಾನು ಓಹೋ

ಏನಪ್ಪಾ ಎನ್ನುವುದರೊಳಗಾಗಿ ಟ್ರಾಮಿನ ಅತ್ತಕಡೆ ಬಾಗಿಲಿನಿಂದ ಸರ್ರನೆ ಇಳಿದು ಹೋದ. ನಾನು ಇಳಿದೆ. ಇಳಿದು ನೋಡುವಷ್ಟರಲ್ಲಿ ಗುಂಪಿನ ಲ್ಲೆಲ್ಲೋ ಮಾಯವಾಗಿದ್ದ' ಎಂದರು.

'ಸದ್ಯ ನಮ್ಮಪ್ಪಾ ಬದುಕಿದ್ದಾನೆ ಎಂದು ತಿಳಿಸಿದರಲ್ಲಾ—' ಎಂದು ಕೂಡಲೆ ದೇವರಿಗೆ ದೀಪ ಹಚ್ಚಿದರು.

ಶಾಂತಯ್ಯ ಪಾರ್ವತಮ್ಮನವರ ಮನೆಗೆ ಬರುವುದನ್ನು ಚೆನ್ನಾಗಿ ಅಭ್ಯಾಸ ಮಾಡಿಬಿಟ್ಟ. ಸೀತಾ ಲಕ್ಷ್ಮಿಯ ಮಗುವಿಗೆ ಆಟದ ಸಾಮಾನು ತಂದು ಕೊಡುವುದು. ರಾಮುವನ್ನು ಬೈಯುವುದು. ಸುಶೀಲಳ ವಿಚಾರದಲ್ಲಿ ಕನಿಕರಪಟ್ಟವನಂತೆ ಆಡುತ್ತ ಪಾರ್ವತಮ್ಮನವರ ಸಲಿಗೆ ಪಡೆಯಲು ಹವಣಿಸಿದ. ತನ್ನನ್ನು ಒಪ್ಪಿಯುವನೆಂದರೆ ಸಾಕು, ಅನಂತರ ಭಾಗ್ಯ ಬುಟ್ಟಿಗೆ ಬಿದ್ದಂತೆಯೇ ಸರಿ ಎಂದು ತಿಳಿದಿದ್ದನು.

ಒಮ್ಮೆ ಇವನು ಬಂದಾಗ ಪಾರ್ವತಮ್ಮ ಒಳಗೆ ಕೆಲಸಮಾಡುತ್ತಿದ್ದರು. ಸೀತಾ ತನ್ನ ಮಗುವನ್ನೆತ್ತಿಕೊಂಡು ಗುಡಿಗೆ ಹೋಗಿದ್ದಳು. ಭಾಗ್ಯ ಮಾತ್ರ ಒಂದು ಹಾಡನ್ನು ಗೊಣಗುಟ್ಟುತ್ತಾ ಜಡೆಯ ತುದಿಯನ್ನು ಹೆಣೆದುಕೊಳ್ಳುತ್ತಾ, ಕನ್ನಡಿಯ ಮುಂದೆ ನಿಂತಿದ್ದಳು. ಶಾಂತಯ್ಯ ತಾನು ಒಪ್ಪಿಯ ಸಮಯಕ್ಕೆ ಬಂದೆನೆಂದು ಭಾವಿಸಿ, ತನ್ನ ಜೋಬಿನಿಂದ ಒಂದು ಬ್ರೋಚನ್ನು ತೆಗೆದು 'ಭಾಗ್ಯಮ್ಮಾ ಇದು ಚಂದಾಗೈತಾ ನೋಡು' ಎಂದ. ಶಾಂತಯ್ಯ ಒಳಗೆ ಬಂದಿದ್ದು ಅವಳಿಗೆ ಅವನು ಮಾತನಾಡಿದಾಗಲೇ ತಿಳಿದದ್ದು. ಭಾಗ್ಯ ಆ ಬ್ರೋಚನ್ನು ತೆಗೆದುಕೊಂಡು ತಲೆಗೆ ಸಿಕ್ಕಿಸಿಕೊಂಡು 'ಅಮ್ಮಾ ನನಗೆ ಈ ಬ್ರೋಚ್ ಒಪ್ಪೋದಿಲ್ವಾ' ಎಂದು ಕೋಣೆಯ ಬಾಗಿಲಲ್ಲಿ ತನ್ನ ತಾಯಿಗೆ ತೋರಿಸಲು ನಿಂತಳು.

ಹಾಲಿನಲ್ಲಿ ನಡೆದ ಸಂಭಾಷಣೆಯೆಲ್ಲಾ ಪಾರ್ವತಮ್ಮನವರಿಗೆ ಕೇಳಿಸಿತ್ತು. 'ಭಾಗ್ಯ ಹಾಗೆಲ್ಲಾ ಮಾಡಬಾರದು. . .ಶಾಂತಯ್ಯ ಅವನ ಮಕ್ಕಳಿಗೆ ತಂದಿರುವಾಗ, ನೀನು ಮಕ್ಕಳಿಗಿಂತ ಹೆಚ್ಚಾಗಿ ಆಡಬಾರದು' ಎಂದರು.

'ಹೂ. . .ನಾನೇನು ಇಟ್ಟುಕೋತೀನೇನೋ, ತಮಾಷೆಗೆ ನಿನಗೆ ತೋರಿಸಿದೆ' ಎಂದು ಹೇಳಿ ಬ್ರೋಚ್ ತಿರುಗಿ ಕೊಟ್ಟಳು. ಪಾರ್ವತಮ್ಮ

ಒಳಗೇ ಇದ್ದಾರೆಂದು ಧೈರ್ಯ ಹೊಂದಿ ಶಾಂತಯ್ಯ ಮೆಲ್ಲಗೆ 'ಭಾಗ್ಯ ಬ್ರೋಚ್ ನಾನು ನಿನಗೆ ತಂದಿದ್ದು' ಎಂದ ಭಾಗ್ಯಳಿಗೆ ನಗು ತಡೆಯಲಾಗಲಿಲ್ಲ. ತನ್ನ ತಾಯಿಯ ಕೋಪವನ್ನೆಲ್ಲಾ ಮರೆತಳು- ಕೂಡಲೇ 'ಅಮ್ಮಾ ನನಗಂತೇ ಕಣೇ ಆ ಬ್ರೋಚ್' ಎಂದು ಗಟ್ಟಿಯಾಗಿ ನಗಲಾರಂಭಿಸಿದಳು. ಇವಳ ಹುಡುಗಾಟ ಕೇಳಲಾರದೆ ಪಾರ್ವತಮ್ಮ ಹೊರಗೆ ಬಂದರು. ಏನು ಭಾಗ್ಯ, ಶಾಂತಯ್ಯನ ಕೂಡ ನಿನ್ನ ಸರಸ ಎಂದು ಹೇಳಿ ಶಾಂತಯ್ಯನ ಕಡೆ ತಿರುಗಿ ಬ್ರೋಚ್ ಕೊಟ್ಟಳೋ ಇಲ್ಲವೋ ಎಂದು ಕೇಳಿದರು.

'ಕೊಟ್ಟಳು' ಎಂದು ಆ ಬ್ರೋಚ್‌ನ್ನು ಹಿಡಿದು ತೋರಿಸಿದ.

'ಏನು ನಿನ್ನ ಮಗುವಿಗೋ, ಬಹಳ ಚೆನ್ನಾಗಿದೆ' ಎಂದರು. 'ಹೌದು ನನ್ನ ಮಗು ಗಿರಿಜಳಿಗೆ' ಎಂದು ಹಲ್ಲು ಕಿರಿಯುತ್ತಾ ಬ್ರೋಚನ್ನು ಜೋಬಿಗೆ ಬಿಟ್ಟನು.

ಶಾಂತಯ್ಯ ಅಷ್ಟಕ್ಕೇ ತನ್ನ ಯತ್ನಗಳನ್ನು ನಿಲ್ಲಿಸಲಿಲ್ಲ. ತನ್ನ ಕೈಯಿಂದ ಆಗುವ ಸಹಾಯ ಮಾಡಿ ಮುಂದೆ ತನ್ನ ಮನೋಭಿಲಾಷೆಯನ್ನು ಸಾಧಿಸಲು ನಿರ್ಧರಿಸಿದ. ಭಾಗ್ಯಳಿಗೂ ತನ್ನ ಅಭಿಲಾಷೆ ತಿಳಿಯಲೆಂದು ಕಾರ್ಯ ಸಾಧನೆ ಮಾಡುತ್ತಿದ್ದ. ಅವಳು ಕಾಲೇಜಿಗೆ ಹೋಗುವ ಸಮಯಕ್ಕೆ ಸರಿಯಾಗಿ ಹಾಜರಾಗಿರುತ್ತಿದ್ದ. ಅವಳ ಜೊತೆಯಲ್ಲಿಯೇ ಒಂದೊಂದು ದಿನ ಬಸ್-ಸ್ಟಾಂಡಿನವರೆವಿಗೂ ನಡೆದು ಹೋಗುತ್ತಿದ್ದ. ಭಾಗ್ಯಳಿಗೆ ಅವನ ದುರಾಭಿಲಾಷೆಗಳು ಬೇಗನೆ ಗೊತ್ತಾದವು. ಅವನಿಗೆ ಚೆನ್ನಾಗಿ ಬುದ್ಧಿ ಕಲಿಸಲು ಮನಸ್ಸಿನಲ್ಲಿಯೇ ಆಲೋಚಿಸಿಕೊಂಡಳು. ಆದರೆ ಆ ಆಲೋಚನೆಯನ್ನು ಪಾರ್ವತಮ್ಮನವರಿಗೆ ಮಾತ್ರ ತಿಳಿಸಲಿಲ್ಲ.

ಶಾಂತಯ್ಯ ಮಾತ್ರ ಸರಿಯಾದ ಸಮಯಕ್ಕೆ ಹೊಂಚು ಹಾಕುತ್ತಿದ್ದ. ಪಾರ್ವತಮ್ಮನವರಿಗೆ ಜ್ಯೋತಿಷ್ಯ ಮತ್ತು ಪ್ರಶ್ನೆ ಕೇಳುವುದರಲ್ಲಿ ಸ್ವಲ್ಪ ಹುಚ್ಚು ಇತ್ತು. ಅಂಥಹವರು ಎಲ್ಲಿಯಾದರೂ ಇದ್ದಾರೆಂದು ಗೊತ್ತಾದ ಕೂಡಲೇ ಅಲ್ಲಿಗೆ ಹೋಗಿ ರಾಜಶೇಖರನ ವಿಷಯವನ್ನು ಕೇಳುತ್ತಿದ್ದರು.

ಈ ವಿಷಯವು ತಿಳಿಯುತ್ತಲೂ ಶಾಂತಯ್ಯ ಒಂದು ಉಪಾಯ ಹೂಡಿದ. ಮಲ್ಲೇಶ್ವರದಲ್ಲಿ ಯಾರೋ ಹೆಸರುವಾಸಿಯಾದ ಜೋತಿಷ್ಯ

ಹೇಳುವವರು ಇದ್ದಾರೆಂದೂ ಅವರಲ್ಲಿ ರಾಜಶೇಖರನ ವಿಷಯ ಕೇಳಬಹು ದೆಂದೂ ಹೇಳಿ, ಅವನ ಅಡ್ರೆಸ್ಸನ್ನು ಗುರುತು ಹಾಕಿಕೊಟ್ಟ. ಪಾರ್ವತಮ್ಮ ಆಗಲಿ ಇವರನ್ನೂ ಕೇಳಿ ನೋಡೋಣ ಎಂದು ಶನಿವಾರ ಅಲ್ಲಿಗೆ ಹೊರಡಲು ನಿರ್ಧರಿಸಿದರು. ಶನಿವಾರ ಭಾಗ್ಯಳಿಗೆ ಕಾಲೇಜು ಇರುವುದಿಲ್ಲ. ಅವಳನ್ನು ಮನೆಯಲ್ಲಿಯೇ ಬಿಟ್ಟು ತಾವೂ ಸೀತಾಲಕ್ಷ್ಮಿ ಇಬ್ಬರೂ ಹೊರಡಬೇಕೆಂದು ನಿಷ್ಕರ್ಷಿಸಿದರು.

ಅವರಿಬ್ಬರೂ ಹೋದುದನ್ನೇ ಶಾಂತಯ್ಯ ಹೊಂಚು ಹಾಕಿ ಕಾಯು ತ್ತಿದ್ದ. ಮತ್ತೆಲ್ಲಾದರೂ ಇದ್ದಕ್ಕಿದ್ದ ಹಾಗೆಯೇ ಹಿಂದಿರುಗುವರೋ ಎಂಬ ಭಯದಿಂದ ಸ್ವಲ್ಪ ಹೊತ್ತು ಹೋಗಲೆಂದು ಹಾಗೆಯೇ ನಿಂತಿದ್ದ. ಅಷ್ಟ ರೊಳಗಾಗಿ ಭಾಗ್ಯ ತನ್ನ ಸೀರೆಯನ್ನು ಒಗೆದುಕೊಂಡು ಹರವಲು ನಡು ಮನೆಗೆ ತೆಗೆದುಕೊಂಡು ಹೋದಳು. ಶಾಂತಯ್ಯ ಸದ್ದುಮಾಡದೆ ಅವರ ಮನೆಯನ್ನು ಹೊಕ್ಕನು. ಭಾಗ್ಯ ಸೀರೆಯನ್ನು ಹರವುತ್ತಿದ್ದಳು. ಅವಳ ಕೂದಲೆಲ್ಲಾ ಕೆದರಿತ್ತು. ತುಂಬು ಸೀರೆಯ ಅನೇಕಭಾಗವು ನೆನೆದಿದ್ದಿತು.

ಶಾಂತಯ್ಯ ಬಂದದ್ದು ನೋಡಿ ಭಾಗ್ಯ ಸೆರಗನ್ನು ಸರಿಮಾಡಿಕೊಂಡು ಮೈಯನ್ನು ಮುಚ್ಚಿಕೊಂಡಳು.

ತಾನು ಬಹಳ ಒಳ್ಳೆಯ ಸಮಯಕ್ಕೆ ಬಂದೆನೆಂದು ಶಾಂತಯ್ಯ ಸಂತೋಷ ಪಟ್ಟನು. ಮೆಲ್ಲನೆ ಕದವನ್ನು ಮುಚ್ಚಿ 'ಭಾಗ್ಯ' ಎಂದು ಹಲ್ಲು ಕಿರಿಯುತ್ತಾ ಬಾಯಿಬಿಟ್ಟನು. ಅವಳಿಗೆ ಅವನ ಉದ್ದೇಶ ಕೂಡಲೇ ಹೊಳೆ ಯಿತು. ತಾನೂ ಚುರುಕಾದಳು. ಅವನು ಏನುಮಾಡುತ್ತಾನೋ ನೋಡ ಬೇಕೆಂದು, ಹೆದರದೆ, ಕೂಗದೆ ಹಾಗೆಯೇ ನಿಂತುಕೊಂಡಳು. ಅದನ್ನು ನೋಡಿ 'ಭಾಗ್ಯ' ನನ್ನ ರಾಣಿ, ಎಂದು ಅವಳನ್ನು ತಬ್ಬಿಕೊಳ್ಳಲು ಶಾಂತಯ್ಯ ಮುಂದುವರಿದನು.

ಭಾಗ್ಯಳಿಗೆ ಇನ್ನು ಸುಮ್ಮನಿರಲಾಗಲಿಲ್ಲ. ಹಲ್ಲು ಕಚ್ಚಿಕೊಂಡು 'ಭಾಗ್ಯ ರಾಣೀನಾ—ರಾಣೀ—' ಎನ್ನುತ್ತಾ ಫಳೀರನೆ ಅವನ ಕಪಾಳಕ್ಕೆ ಏಟು ಹೊಡೆದು ಬಾಗಿಲ ಬಳಿ ಮುಂದುವರಿದಳು. ಏಟು ಬಿದ್ದಮೇಲೆ ಶಾಂತಯ್ಯನಿಗೆ ಸುಮ್ಮನಿರಲಾಗಲಿಲ್ಲ. 'ಭಾಗ್ಯ! ಈ ಸಮಯಕ್ಕೆ ಎಷ್ಟು ಕಾದೆ ನಿನಗೆ ಗೊತ್ತೋ' ಎಂದು ಅವಳ ಒಂದು ಕೈಯನ್ನು ಬಿಗಿಯಾಗಿ

ಹಿಡಿದ. ಅನಂತರ ಭಾಗ್ಯಳು ಪ್ರತಿಭಟಿಸುತ್ತಿದ್ದರೂ ಅವಳನ್ನು ಹತ್ತಿರಕ್ಕೆ ಬರಸೆಳದು, 'ಗಲಾಟೆ ಮಾಡಬೇಡ, ಭಾಗ್ಯ.' ಎಂದು ಮುತ್ತುಕೊಡಲು ಮುಖವನ್ನು ತಗ್ಗಿಸಿದನು.

ಭಾಗ್ಯಳು ತನ್ನ ಮುಖವನ್ನು ದೂರ ಮಾಡಿಕೊಂಡಳು. ಕಿರುಚುವುದೊಂದು ದಾರಿ ಬಿಟ್ಟರೆ, ಬೇರೆ ಯಾವುದೂ ಅವಳಿಗೆ ಕೂಡಲೇ ತೋರಲಿಲ್ಲ. ಅದರಿಂದ ದೊಡ್ಡ ಹಗರಣವಾಗಬಹುದೆಂದು ತಿಳಿದು, ಒಂದು ಉಪಾಯ ಹೂಡಿದಳು.

ಶಾಂತಯ್ಯ ಭಾಗ್ಯಳನ್ನು ಬಿಗಿದಪ್ಪಿದ. ಆದರೂ ಅವಳು ಹತಾಶಳಾಗಲಿಲ್ಲ. ಒಂದು ನಿಮಿಷ ಹಾಗೂ ಹೀಗೂ ಹೋರಾಡಿ 'ಸೀತಾಲಕ್ಷ್ಮಿ....ಸೀತಾಲಕ್ಷ್ಮೀ ಬಾಗಿಲು ತಳ್ಳು ; ಬರುತ್ತೆ' ಎಂದು ಗಟ್ಟಿಯಾಗಿ ಕೂಗಿದಳು. ಶಾಂತಯ್ಯನಿಗೆ ಸ್ವಲ್ಪ ದಿಗ್ಭ್ರಮೆಯಾಯಿತು. ಮಲ್ಲೇಶ್ವರಕ್ಕೆ ಹೋಗಿದ್ದನ್ನು ತಾನೆಯೇ ನೋಡಿದ್ದ. ಇಲ್ಲಿ ಪುನಃ ಹೇಗೆ ಸೀತಾಲಕ್ಷ್ಮಿ ಬಂದಳೆಂಬುದು ಅವನಿಗೆ ಸಮಸ್ಯೆಯಾಯಿತು. ಆದರೂ ಭಾಗ್ಯಳನ್ನು ಬಿಗಿಯಾಗಿಯೇ ಅಪ್ಪಿಕೊಂಡಿದ್ದ. ಪುನಃ ಭಾಗ್ಯ ಜೋರಾಗಿ ನೂಕು ಸೀತಾ, ಬೇಗ ನೂಕು, ಬೇಗ, ಬೇಗ' ಎಂದು ಗಟ್ಟಿಯಾಗಿ ಹೇಳಿದಳು.

ಶಾಂತಯ್ಯನಿಗೆ ಸ್ವಲ್ಪ ಹೆದರಿಕೆಯಾಯಿತು. ತನ್ನ ಕಾರ್ಯ ಅವರಿಗೆ ಗೊತ್ತಾದರೆ ಮಾಡುವುದೇನು? ಎಂಬ ಭಾವನೆಯು ಅವನ ಮನಸನ್ನಾವರಿಸಿತು. ಯೋಚನೆಯ ಮಧ್ಯೆ ಭಾಗ್ಯಳ ಮೇಲಿಟ್ಟಿದ್ದ ಹಿಡಿತವನ್ನು ಸಡಲಿಸಿದ. ಮರುಕ್ಷಣದಲ್ಲಿಯೇ ಭಾಗ್ಯಳು ಮಿಂಚಿನಂತೆ ಹಾರಿ ಚಿಲಕ ತೆಗೆದಳು. 'ರಾಣೀ ಅಲ್ವೇ ರಾಣಿ. ಹೌದು ರಾಣೀನೇ ಮಾತಾಡುತ್ತಿರುವುದು. ಬಿಡಿಗಾಡಿ ಇಲ್ಲಿಂದ' ಎಂದು ಶಾಂತಯ್ಯನಿಗೆ ಆಜ್ಞೆ ಮಾಡಿದಳು.

ಶಾಂತಯ್ಯನಿಗೆ ಬಹಳ ಅವಮಾನವಾಯಿತು. ಹೊರಗೆ ಸೀತಾಲಕ್ಷ್ಮಿ ಇರಲಿಲ್ಲ. ಎಲ್ಲಾ ಈ ಹುಡುಗಿ ಮಾಡಿರುವ ಆಟ ಎಂದು ಹೊಳೆಯುತ್ತಲೇ ಅವನಿಗೆ ಮುಖವೆತ್ತುವುದಕ್ಕೂ ನಾಚಿಕೆಯಾಯಿತು. ಬಾಗಿಲ

ಹತ್ತಿರ ಇನ್ನು ನಿಂತರೆ ಮತ್ತೆಲ್ಲಿ ಅವಾಂತರ ತೆಗೆಯುವಳೋ ಎಂದು ಹೆದರಿ, ತಲೆತಗ್ಗಿಸಿಕೊಂಡು ಹೊರಟೇಹೋದ.

ಬಹಳ ಹೊತ್ತಿನ ಮೇಲೆ, ಭಾಗ್ಯಳ ಕೋಪವಿಳಿಯಿತು. ಅಲ್ಲಿಯ ವರೆವಿಗೂ ತಾನು ಮಾಡಿದ ತಂತ್ರವನ್ನೇ ನೆನೆನೆನೆದು 'ರಾಣಿ' ಯಂತೆ 'ರಾಣಿ' ಎಂದು ಗೊಣಗುತ್ತಾ ತಿರುಗುತ್ತಿದ್ದಳು.

ತಾಯಿ ಬರುವವರೆಗೂ ಭಾಗ್ಯ ಈ ವಿಷಯವನ್ನೇ ಯೋಚಿಸುತ್ತಿದ್ದಳು. ತಾನು ಕೊಟ್ಟ ಏಟು ಅವನಿಗೆ ಚೆನ್ನಾಗಿ ಬಿದ್ದುದಕ್ಕಾಗಿ ಬಹಳ ಸಂತೋಷಪಟ್ಟಳು. ಆದರೆ ತಾಯಿ ಬಂದಮೇಲೆ ಈ ವಿಷಯವನ್ನಾಡಲು ಅವಳಿಗೆ ನಾಲಿಗೆ ಬರಲಿಲ್ಲ. ಹಾಗೆ ಮಾಡಿದರೆ, ತಾಯಿಗೆ ಬಹಳ ವ್ಯಥೆಯಾಗುವುದೆಂದೂ ಅವಳಿಗೆ ಗೊತ್ತಿತ್ತು.

ತಾಯಿ ಮತ್ತು ಅವಳ ಅಕ್ಕ ಕಾಲೆಳದು ಮಲ್ಲೇಶ್ವರದ ತನಕ ಹೋಗಿಬಂದರು. ಅಲ್ಲಿ ಜ್ಯೋತಿಷ್ಯ ಹೇಳೋನೇನೂ ಇರಲಿಲ್ಲ. ಪೆಚ್ಚು ಮೋರೆ ಹಾಕಿಕೊಂಡು, ಶಾಂತಯ್ಯನನ್ನು ಇನ್ನೊಂದು ಸಾರಿ ಕರೆದುಕೊಂಡು ಹೋಗಬೇಕೆಂದು ನಿರ್ಧರಿಸಿದರು.

## ಹನ್ನೊಂದು

ಲಕ್ಷ್ಮಣರಾಯರು ಊರಿನ ಮುನಿಸಿಪಲ್ ಕಮೀಷನರಾಗಿ ಹೊಸದಾಗಿ ಬಂದರು. ಮುನಿಸಿಪಲ್ ಕೌನ್ಸಿಲರುಗಳೆಲ್ಲಾ ಇವರಲ್ಲಿ ವಿಶ್ವಾವಸನ್ನಿಟ್ಟುಕೊಂಡಿದ್ದರು. ಯಾರ ಮೇಲೆಯೂ ತಮ್ಮ ಅಧಿಕಾರ ಅವರು ತೋರಿಸುತ್ತಿರಲಿಲ್ಲ. ಬದಲು ಅವರುಗಳ ಜೊತೆ ಒಂದು ಮನೆಯವರಂತೆ ಕೆಲಸ ಮಾಡಿಕೊಂಡು ಹೋಗುತ್ತಿದ್ದರು. ವಾರಕ್ಕೆ ಒಂದು ಸಲವಾದರೂ ಕೌನ್ಸಿಲರುಗಳ ಜೊತೆ ಅವರವರುಗಳ ಡಿವಿಜನಿಗೆ ಭೇಟಿ ಕೊಟ್ಟು ಸೂಕ್ತರೀತಿಯಲ್ಲಿ ಅನ್ಯೋನ್ಯದಿಂದ ಸಲಹೆಗಳನ್ನು ಕೊಡುತ್ತಿದ್ದರು.

ರಂಗೈಯ್ಯ ಶೆಟ್ಟರು ಈಸಲ ಮುನಿಸಿಪಲ್ ಅಧ್ಯಕ್ಷರಾದ ಮೇಲಂತೂ ಇಬ್ಬರ ಪರಿಚಯವೂ ಮತ್ತಷ್ಟು ಹೆಚ್ಚಿತು. ಶೆಟ್ಟರೂ ಲಕ್ಷ್ಮಣರಾಯರೂ ಅಣ್ಣಾ ತಮ್ಮಂದಿರಂತೆ ಪೌರಸಭೆಯ ಕಾರ್ಯಗಳನ್ನು ಸಾಗಿಸ ತೊಡಗಿದರು. ಇದನ್ನು ನೋಡಿ ಸರಕಾರದವರು ರಂಗೈಯ ಶೆಟ್ಟರಿಗೆ ಸಾರ್ವಜನಿಕ ಪಾರಿತೋಷಕವನ್ನು ದಯಪಾಲಿಸಿದರು.

ತನ್ನ ಮಗನು ಪಾಶ್ಚಿಮಾತ್ಯ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಬಂದುದರ ಸಲುವಾಗಿ ಅಂದು ರಾಯರು ಒಂದು ಸತ್ಕಾರಕೂಟವನ್ನು ಏರ್ಪಡಿಸಿದ್ದರು. ಆ ಕೂಟಕ್ಕೆ ಅನೇಕ ಸರಕಾರಿ ಅಧಿಕಾರಿಗಳನ್ನೂ ಪೌರ ಸಭಾಸದಸ್ಯರುಗಳನ್ನೂ ಕರೆದಿದ್ದರು. ಇದೇ ಒಳ್ಳೆ ಸಮಯವೆಂದರಿತು ಲಕ್ಷ್ಮಣರಾಯನ ಪತ್ನಿಯವರು ತಮ್ಮ ಬಳಗದವರಲ್ಲೇ ಅನೇಕರಿಗೆ ಆಹ್ವಾನವನ್ನು ಕಳುಹಿಸಿದ್ದರು.

ಅಂದರೆ ಮಾಧೂಗೆ ಹೆಣ್ಣನ್ನು ಕೊಡಲು ಆಗಲೇ ಅನೇಕರು ಮುಂದೆ ಬಂದಿದ್ದರು. ಒಂದೇಸಲ ಎಲ್ಲರನ್ನೂ ನೋಡಲು ಈಗ ಅವಕಾಶವಿರುವುದರಿಂದ ಅವರುಗಳಿಗೆಲ್ಲಾ ಆಹ್ವಾನ ಹೋಗಿತ್ತು. ರಂಗೈಯ ಶೆಟ್ಟರು ಮುತುವರ್ಜಿಯಿಂದ ಆ ರಸ್ತೆಯನ್ನು ಶುಭ್ರಗೊಳಿಸಿ ಹೂವಿನ ಅಲಂಕಾರಗಳ ಉಸ್ತುವಾರಿಯಲ್ಲಿ ತೊಡಗಿದರು.

ಮಾಧು ತನ್ನ ವಿಲಾಯತಿಯ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಬಂದು ಒಂದು ತಿಂಗಳಾಗಿತ್ತು. ಮುಂದೆ ತಮ್ಮ ಮಗನಿಗೆ ಕೆಲಸ ದೊರಕಿಸಿಕೊಡುವ ಪ್ರಯತ್ನದಲ್ಲಿ ಲಕ್ಷ್ಮಣರಾಯರು ತೊಡಗಿದರು. ಬಂದ ಕೆಲವು ದಿನಗಳೊಳಗಾಗಿಯೇ ದಿವಾನ್ ಸಾಹೇಬರ ಭೇಟಿಮಾಡಿಸಿದರು. ಸಾಹೇಬರು ಆದರದಿಂದ ಮಾಧುವನ್ನು ಬರಮಾಡಿಕೊಂಡು ಮಾತುಕತೆಗಳನ್ನಾಡಿದರು. ಆಗ ಲಕ್ಷ್ಮಣರಾಯರು ಹೊಸದಾಗಿ ತೆಗೆಯಲಿರುವ ಟೆಕ್ನಿಕಲ್ ಶಾಲೆಯ ಪ್ರಸ್ತಾಪವನ್ನೆತ್ತಿದರು. ದಿವಾನ್ ಸಾಹೇಬರು ಒಳ್ಳೊಳ್ಳೆಯ ಕೆಲಸಗಳಿಗೆಲ್ಲಾ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆದಿರುವವರನ್ನು ನೇಮಿಸಬೇಕೆಂದಿರುವುದಾಗಿ ತಿಳಿಸಿ ಮಾಧುವನ್ನೇ ಆ ಶಾಲೆಯ ಮುಖ್ಯ ಉಪಾಧ್ಯಾಯನನ್ನಾಗಿ ಮಾಡುವ ಭರವಸೆ ಇತ್ತರು. ರಾಯರ ಮುಖ ಅರಳಿತು. ದಿವಾನ್ ಸಾಹೇಬರಿಗೆ ಅನಂತ ನಮಸ್ಕಾರಗಳನ್ನು ಮಾಡಿ ತೆರಳಿದರು.

ಮಾಧುವೇನೋ ಪುಣ್ಯಶಾಲಿ. ಕೂಡಲೇ ಕೆಲಸವೂ ಅವನಿಗೆ ದೊರೆಯಿತು. ಒಂದು ಮದುವೆಯನ್ನೂ ಮಾಡಿಬಿಟ್ಟರೆ ತಮ್ಮ ಹುಡುಗನ ಮೇಲಿದ್ದ ಜವಾಬ್ದಾರಿಯೆಲ್ಲಾ ಕಳೆಯುವುದೆಂದು ಲಕ್ಷ್ಮಣರಾಯರು ಭಾವಿ

ಸಿದ್ದರು. ಅಂದಿನ ಸತ್ಕಾರಕೂಟಕ್ಕೆ ಅನೇಕರು ತಮ್ಮ ಹೆಣ್ಣು ಮಕ್ಕಳನ್ನು ಚೆನ್ನಾಗಿ ಶೃಂಗರಿಸಿಕೊಂಡು ಬಂದಿದ್ದರು.

ರಂಗೈಯ ಶೆಟ್ಟರದೇ ಮೇಲಿನ ಓಡಾಟವಾದುದರಿಂದ ಭಾಗ್ಯಳನ್ನೂ ಬರಬೇಕೆಂದು ಕೇಳಿಕೊಂಡರು. 'ನನಗೇನು ಶೆಟ್ಟರೇ ಯಾರ ಮನೇಲಿ ಏನೋ ಆದರೆ? ನನಗೂ ಅದಕ್ಕೂ ಏನು ಸಂಬಂಧ' ಎಂದಳು ಭಾಗ್ಯ. 'ಹಾಗಲ್ಲಾ ಭಾಗ್ಯ, ನನ್ನ ಹೆಂಡತೀನ ಎಷ್ಟು ಕೇಳಿಕೊಂಡರೂ ಬರುವುದಿಲ್ಲಾ ಎನ್ನುತ್ತಾಳೆ. ನೀನು ಓದಿದವಳು. ಅವಳ ಜೊತೆ ಬರುತ್ತೇನೆ ಎಂದರೆ ಅವಳನ್ನೂ ಹೊರಡಿಸುತ್ತೇನೆ' ಎಂದರು ಶೆಟ್ಟರು.

ಪಾರ್ವತಮ್ಮನವರು, 'ಭಾಗ್ಯ ನೀನು ಹೋಗಿಬಿಟ್ಟು ಬಾಮ್ಮಾ ಪಾಪ! ಅವರಿಗೂ ಅವರ ಹೆಂಡತಿ ಸ್ವಲ್ಪ ಓಡಾಡಲಿ ಎಂದು ಆಸೆ........ ಯೋಚಿಸಿ ನೋಡು. ನಮಗೆಷ್ಟು ಸಹಾಯ ಮಾಡಿದ್ದಾರೆ ಅವರು........ ನಾವ್ಯಾಕೆ ಅವರ ವಿಷಯದಲ್ಲಿ ಜಂಬ ತೋರಿಸಬೇಕು' ಎಂದರು. ಅಂತೂ ಭಾಗ್ಯಳು 'ಬರುತ್ತೇನಿ' ಎಂದೆನ್ನಬೇಕಾಯಿತು.

ಶೇಷಮ್ಮಾ (ಶೆಟ್ಟರ ಹೆಂಡತಿ) ಹಳೇ ಕಾಲದವರು. ಅವರಿಗೆ ಇವೊಂದೂ ಬೇಕಾಗಿರಲಿಲ್ಲ. ಭಾಗ್ಯ, ಪಾರ್ವತಮ್ಮನವರು ಗಲಾಟೆ ಮಾಡಲು ಅವರೂ ಹೊರಡಲು ಒಪ್ಪಿದರು.

ಆ ವಿಶೇಷ ಸಮಾರಂಭವು ಬಹಳ ಚೆನ್ನಾಗಿಯೇ ನಡೆಯಿತು. ಬಂದವರನ್ನೆಲ್ಲಾ ಆದರದಿಂದ ವಿಚಾರಿಸಲು ರಂಗೈಯ ಶೆಟ್ಟರೇ ನಿಂತಿದ್ದರು. ತಮ್ಮ ಹೆಂಡತಿಯು ಬಂದುದರಿಂದ ಶೆಟ್ಟರ ಉತ್ಸಾಹ ಇಮ್ಮಡಿಸಿತು. ಹತ್ತಿರದಲ್ಲಿಯೇ ಇದ್ದ ಕನ್ನಡಿಯ ಮುಂದೆ ನಿಂತು, ತಮ್ಮ ಐದು ಬೆರಳಂಚಿನ ಜರೀ ರುಮಾಲನ್ನು ಸರಿಮಾಡಿಕೊಂಡು, ಹಸುರು ಕೆಂಪು ಬಣ್ಣದಿಂದ ಕೂಡಿದ ರೇಷ್ಮೆ ವಲ್ಲಿಯನ್ನು ನಾಜೂಕಾಗಿ ಹೊದ್ದುಕೊಂಡರು.

ಮಾಧು ಬಂದ ಅತಿಥಿಗಳ ಹತ್ತಿರ ನಯವಾಗಿ ಮಾತನಾಡುತ್ತಿದ್ದನು. ಇಂಗ್ಲೆಂಡಿಗೆ ಹೋಗಿ ಬಂದ ಮಾತ್ರಕ್ಕೆ ಅವನಿಗೆ ಜಂಭವಿರಲಿಲ್ಲ. ಲಕ್ಷ್ಮಣರಾಯರು ಬಂದವರೊಡನೆ ತಮ್ಮ ಮಗನ ವಿಚಾರವನ್ನು ಆಡುತ್ತಿದ್ದರು. ಆಗಾಗ್ಗೆ ಕೆಲವರು ತಮ್ಮ ಹೆಣ್ಣು ಮಕ್ಕಳನ್ನು ತಮ್ಮ ಜೊತೆ ಕರೆತಂದು ಲಕ್ಷ್ಮಣರಾಯರು ಮತ್ತು ಮಾಧುವಿಗೆ ತೋರಿಸುತ್ತಿದ್ದರು.

ಕೊನೆಗೆ ರಾತ್ರಿ ಎಂಟು ಗಂಟೆಗೆ ಹೆಚ್ಚು ಕಮ್ಮಿ ಎಲ್ಲವೂ ಮುಗಿಯುತ್ತಾ ಬಂತು. ಅನಂತರ ಉಳಿದವರು ಕೇವಲ ಆತ್ಮೀಯರೇ. ಲಕ್ಷ್ಮಣರಾಯರ ಅಣ್ಣ 'ಲಕ್ಷ್ಮಣಾಬೇಗನೆ ಮಾಧೂಗೆ ಹೆಣ್ಣು ಗೊತ್ತು ಮಾಡಿಬಿಡಪ್ಪಾ -ಇವತ್ತು ಏಳು ಎಂಟು ಮಂದಿ ಬಂದಿದ್ದರಲ್ಲಾ—' ಎಂದರು.

'ಅವನ್ನೇ ಈಗ ನೋಡುತ್ತಿರುವುದು'

'ಯಾರ ಯಾರ ಮನೇದು ಈಗ ಬಂದಿದ್ದವು?'

'ಎಲ್ಲರೂ ತಮ್ಮ ಮಗಳನ್ನು ಮಾಧುವಿಗೆ ತಂದು ಕೊಳ್ಳಿ ಅಂತಿದ್ದಾರೆ. ಡಿಸ್ಟ್ರಿಕ್ಟ್ ಜಡ್ಜ್ ಗೋವಿಂದಯ್ಯ ಬಹಳ ಆಗ್ರಹದಿಂದ ಕೇಳಿಕೊಂಡರು—ಮಾಧುವಿಗೆ ಓದಿದ ಹುಡುಗಿ ಬೇಕು—ಜೊತೆಗೆ ಸ್ವಲ್ಪ ವಯಸ್ಸಾಗಿರಬೇಕು.'

'ಹೌದಪ್ಪ ಹುಡುಗನ ಇಚ್ಛೆ ಹಾಗಿರುವಾಗ ಸಣ್ಣ ಪುಟ್ಟ ಹುಡುಗಿಯರನ್ನು ಅವನಿಗೆ ತರಬೇಡಪ್ಪಾ.'

'ಆದರೆ ಈಗ ಬಂದಿರುವ ಫಜೀತಿ ಓದಿದ ದೊಡ್ಡ ಹುಡುಗಿಯನ್ನು ನೋಡುವುದೇ—ಎಗ್ಸಿಗ್ಯೂಟಿವ್ ಇಂಜಿನೀಯರ್ ಕೃಷ್ಣರಾಯರ ಮಗಳೋ ಓದಿದ್ದಾಳೆ. ಆದರೆ ಹುಡುಗೀ ಸ್ವಲ್ಪವೂ ಚೆನ್ನಾಗಿಲ್ಲಾ'—

ಅಷ್ಟೊತ್ತಿಗೆ ಲಕ್ಷ್ಮಣರಾಯರ ಅಕ್ಕ ಶಾರದಮ್ಮ ಅಲ್ಲಿಗೆ ಬಂದರು. ಸ್ವಲ್ಪಹೊತ್ತು ಅವರಾಡುವ ಮಾತುಗಳನ್ನು ಕೇಳಿ 'ಏನಪ್ಪಾ ಲಕ್ಷ್ಮಣಾ—ಹುಡುಗಿ ಬೆಳದದ್ದೂ ಚನ್ನಾಗಿದ್ದೂ ಓದಿದ್ದೂ ಆದರೆ ನಾವ್ಯಾಕೆ ತರಬಾರದು'—ಎಂದರು.'ಅದೇ ಮಾತೇ ಈಗ ಆಡುತ್ತಿರುವುದು ಶಾರದೆ—ಅಂಥ ಹೆಣ್ಣು ಸಿಗುವುದೇ ಕಷ್ಟವಾಗಿದೆ.'

'ನೋಡು— ನಾನೇನೋ ಒಂದು ಹೆಣ್ಣು ನೋಡಿಇಟ್ಟಿದ್ದೇನೆ. ನೀವುಗಳು ಹೆಣ್ಣಿನ ಮನೆಯವರು ಬಡವರು ಎಂದರೆ ಮಾತ್ರ ಅದು ಸರಿಹೋಗುವದಿಲ್ಲಾ.'—'ಅಯ್ಯೋ! ಆ ಸಿರಿತನ ಬಡತನ ಯಾರಿಗೆಬೇಕು— ಯಾವ ಮನೇದು ಆಹೆಣ್ಣು—?'

'ಆಹೆಣ್ಣು ಇಲ್ಲಿಯೇ ಇದ್ದಾಳೆ—ನನಗಂತೂಪೂರ್ತಿ ಒಪ್ಪಿಗೆಯಾದ ಹಾಗೆಯೇ—ನೋಡೋಕೋ ಲಕ್ಷಣವಾಗಿದೆ. ಜೊತೆಗೆ ಕಾಲೇಜಿನಲ್ಲಿ ಓದುತ್ತಿದೆ.'! 'ಹಾಗಾದರೆ ಯಾರ ಮಗಳು? ನಾನು ನೋಡಲೇ ಇಲ್ಲ

ವಲ್ಲಾ !!—ಮಾಷಂನ ಕೂಗು—ಅವನಿಗೂತೋರಿಸೋಣ, ಬಂದ ಹೆಣ್ಣು ಒಂಮೂ ಚೆನ್ನಾಗಿಲ್ಲಾ ಅಂತಿದ್ದಾನೆ.'

' ಮಾಧು ಹುಡುಗೀನ ನೋಡಿದ ಕೂಡಲೇ ಒಪ್ಪಿದ್ದಾನೆ. ಮಾಧೂ ದೇನೂ ಎದುರು ಮಾತಿಲ್ಲಾ.'

'ಅರೆ ಅರೆ; ನನಗೆ ಈ ವಿಚಾರ ತಿಳಿನಲೇ ಇಲ್ಲವಲ್ಲಾ.'

'ಎಲ್ಲಿ ಕೃಷ್ಣರಾಯರು, ಗೋವಿಂದರಾಯರ ಹತ್ತಿರಮಾತನಾಡುತ್ತಿದೆ ನೀನು—ಈಗಲೂ ನೋಡಬಹುದು ಬಾ' ಎಂದು ಲಕ್ಷ್ಮಣರಾಯರನ್ನು ಭಾಗ್ಯ ಇದ್ದ ಬಳಿ ಕರೆದುಕೊಂಡು ಹೋದರು.

ಶಾರದಮ್ಮ ಬಹಳ ಬುದ್ಧಿಶಾಲಿಗಳು. ಬಂದಿದ್ದ ಹೆಂಗಸರ ಪರಿಚಯ ಪಡೆಯುತ್ತಾ ಹಾಗೆಯೆ ರಂಗೈಯ ಶೆಟ್ಟರ ಹೆಂಡತಿ ಶೇಷಮ್ಮನವರ ಹತ್ತಿರ ಮಾತನ್ನಾಡುತ್ತಿದ್ದರು. ರಂಗೈಯ ಶೆಟ್ಟರು ಪಟ್ಟತೊಂದರೆಗಾಗಿ ಬಹಳ ಧನ್ಯವಾದಗಳನ್ನು ಅರ್ಪಿಸುತ್ತಿದ್ದರು. ಅವರ ಮಗ್ಗುಲಲ್ಲೇ ಇದ್ದ ಭಾಗ್ಯ ಳನ್ನು ನೋಡಿ 'ನಿಮ್ಮ ತಂದೆ ಯಾರಮ್ಮಾ' ಎಂದು ಕೇಳಿದರು.

ಶೇಷಮ್ಮನವರು ಅವಳಿಗೆ ತಂದೆಯಿಲ್ಲವೆಂದೂ ತಾಯಿಯೇ ಕಷ್ಟ ದಿಂದ ಇಬ್ಬರು ಮಕ್ಕಳನ್ನು ಸಾಕುತ್ತಿದ್ದಾರೆಂದೂ ತಿಳಿಸಿದರು. ಮದುವೆ ಮಾಡಲು ಸಾಧ್ಯವಾಗಲಿಲ್ಲವಾದುದರಿಂದ ಓದಿಸುತ್ತಿದ್ದಾರೆಂದೂ ಅವರ ಇನ್ನೊಂದು ಪ್ರಶ್ನೆಗೆ ಉತ್ತರವಿತ್ತರು. ಕೊನೆಯಲ್ಲಿ 'ನೀವು ಕೇಳಿರಬಹುದು ಮಿಲ್ ತಮ್ಮಯ್ಯನವರೆಂದು—ಅವರ ಮಗಳು ಇವಳು' ಎಂದರು. ಯಾವ ಮಿಲ್ಲಿನ ತಮ್ಮಯ್ಯನವರು ಎಂದು ಪ್ರಶ್ನಿಸಿದಾಗ ಭಾಗ್ಯಳೇ ಉತ್ತರ ಹೇಳ ಬೇಕಾಯಿತು. ಭಾಗ್ಯ ತನ್ನ ತಾತ ಮತ್ತು ದೊಡ್ಡಪ್ಪನ ಹೆಸರುಗಳನ್ನು ಹೇಳಿದಳು. ಹಾಗೆಯೇ ಮಾತು ಬೆಳೆಯುತ್ತಲೂ ಭಾಗ್ಯಳ ಮನೆಯವರು ತಮ್ಮ ಜನವೆಂದೇ ಗೊತ್ತಾಯಿತು.

ಕೂಡಲೇ ಮನಸ್ಸಿನಲ್ಲಿ ಮಂಡಿಗೆಗಳನ್ನು ಕಟ್ಟುತ್ತಾ ಬಂದರು. ಬಂದ ಹೆಂಗಸರನ್ನೆಲ್ಲಾ ಬೀಳ್ಕೊಟ್ಟರೂ ಶೇಷಮ್ಮಾ ಭಾಗ್ಯರನ್ನು ಅಲ್ಲಿಯೇ ನಿಲ್ಲಿಸಿಕೊಂಡಿದ್ದರು. ಸ್ವಲ್ಪ ಗಲಾಟೆ ಕಮ್ಮಿಯಾಗಲು ಮಾಧುವನ್ನು ಹತ್ತಿರ ಕರೆದು ಭಾಗ್ಯಳನ್ನು ತೋರಿಸಿ ಒಂದೆರಡು ಮಾತುಗಳನ್ನಾಡಿ ಸಿದರು. ಮಾಧುವೇನೋ ಕೂಡಲೇ ಒಪ್ಪಿಬಿಟ್ಟ. ತನಗೆ ಓದಿದ ಹುಡುಗಿ

ಬೇಕೆಂದು ಬಹಳ ಪ್ರಾರ್ಥಿಸುತ್ತಿದ್ದ. ಅಂತೆಯೇ ಭಾಗ್ಯಳೂ ವಿದ್ಯಾವತಿಯೂ ಮತ್ತು ಲಕ್ಷಣವಂತೆಯೂ ಆಗಿದ್ದಳು.

ಲಕ್ಷ್ಮಣರಾಯರು ಶೇಷಮ್ಮನವರಿಗೆ ಬಹಳ ಧನ್ಯವಾದಗಳನ್ನು ಅರ್ಪಿಸುವ ನೆವದಲ್ಲಿ ಭಾಗ್ಯಳ ಕೂಡ ಮಾತುಗಳನ್ನಾಡಿದರು. ಭಾಗ್ಯ ತಮ್ಮಯ್ಯನವರ ಮಗಳೆಂದು ತಿಳಿಯುತ್ತಲೂ ಬಹಳ ಸಂತೋಷಗೊಂಡರು. ರಂಗಯ್ಯ ಶೆಟ್ಟರೂ ಅಲ್ಲಿಗೆ ಬಂದರು. ಲಕ್ಷ್ಮಣರಾಯರು ಅವರನ್ನೂ ಬಹಳವಾಗಿ ಹೊಗಳಿದರು. ಅವರಿಗೂ ಬಹಳ ಸಂತೋಷವಾಯಿತು.

ರಂಗಯ್ಯ ಶೆಟ್ಟರನ್ನು ತಮ್ಮ ಕಾರಿನಲ್ಲಿಯೇ ಹೋಗಬೇಕೆಂದು ರಾಯರು ಆಜ್ಞೆ ಮಾಡಿದ್ದರು. ಅದರಂತೆ ಅವರ ಹೆಂಡತಿಗೆ 'ಇನ್ನೊಂದು ಸ್ವಲ್ಪ ಹೊತ್ತಿಗೆ ಹೊರಡೋಣ' ಎಂದು ಹೇಳಿದರು. ಮಾಧು ತಾನೇ ಕಾರಿನಲ್ಲಿ ರಂಗಯ್ಯ ಶೆಟ್ಟರ ಮನೆಯವರೆಗೂ ಹೋಗಿ ಬಿಟ್ಟುಬರುವುದಾಗಿ ತಿಳಿಸಿದ. ಶಾರದಮ್ಮ ಮನಸ್ಸಿನಲ್ಲಿಯೇ ನಗುತ್ತಾ 'ಆಗಲಿ ಮಗು — ' ಎಂದರು.

ಕಾರನ್ನು ಬಿಡುತ್ತಾ ಮಾಧು ತನ್ನನ್ನೇ ಮರೆತ. ಕೊನೆಗೆ ರಂಗಯ್ಯ ಶೆಟ್ಟರ ಮನೆ ಹತ್ತಿರ ಬರುತ್ತಲೂ 'ಓ ನಿಲ್ಲಿಸಿ' ಎಂದು ರಂಗಯ್ಯ ಶೆಟ್ಟರು ಹೇಳಬೇಕಾಯಿತು. ಆಗ ಕ್ಷಣ ಮಾತ್ರದಲ್ಲಿಯೇ ಬ್ರೇಕುಗಳನ್ನು ಹಾಕಿ ನಿಲ್ಲಿಸಿದ.

ಕಾರಿಂದ ಇಳಿದ ಭಾಗ್ಯ 'ನಿಮಗೆ ಬಹಳ ತೊಂದರೆಯಾಯಿತು.' ಎಂದಳು. ಅದಕ್ಕೆ ಮಾಧು 'ಖಂಡಿತವಾಗಿಯೂ ಇಲ್ಲಾ—ಅದರ ಬದಲು ನನಗೆ ನಿಜವಾಗಿಯೂ ಬಹಳ ಆನಂದವೇ ಆಯಿತು.' ಎಂದನು.

ರಂಗಯ್ಯ ಶೆಟ್ಟರು 'ಬಹಳ ತೊಂದರೆ ಕೊಟ್ಟೆವು. ಹೋಗುತ್ತೇವೆ ನಮಸ್ಕಾರ, ಎಂದು ಹೇಳಿ ತಮ್ಮ ಹೆಂಡತಿ, ಭಾಗ್ಯಳ ಜೊತೆ ಮನೆಗೆ ಹೋದರು.

ಮನೆಗೆ ಬಂದ ಮಾಧುವಿಗೆ ಭಾಗ್ಯಳ ಯೋಚನೆಯೇ ಆಗಿತ್ತು. ಫೇಸ್-ಪೌಡರ್, ಸ್ನೋ, ಜಾರ್ಜಿಯಟ್ ಸೀರೆ, ಹೈ ಹೀಲ್ಸ್ ಷೂ ಈ ಸಲಕರಣೆಗಳ ಮಧ್ಯೆ ಭಾಗ್ಯಳ ಚಿತ್ರವನ್ನು ರೂಪಿಸಲು ಯತ್ನಿಸುತ್ತಿದ್ದ.

ಎಲ್ಲಕ್ಕಿಂತಲೂ ಪೆಜ್ಜಾಗಿ ಆಂಗ್ಲೇಯರೂ ನಾಚುವ ರೀತಿಯಲ್ಲಿ ಭಾಗ್ಯಳಿಗೆ ಸ್ವಾತಂತ್ರ್ಯ ಕೊಡಬೇಕೆಂಬ ಯೋಚನೆಯಲ್ಲಿ ಮುಳುಗೇಳುತ್ತಿದ್ದ.

ಮಾರನೆಯ ದಿನವೇ ರಾಯರು ಪಾರ್ವತಮ್ಮನವರ ಹತ್ತಿರ ಮುಂದಿನ ಮಾತುಕತೆಗಳನ್ನು ನಡೆಸಲು ತಮ್ಮ ಅಕ್ಕನಿಗೆ ಅಪ್ಪಣೆ ಇತ್ತರು. ಆದರೆ ಹಾಗೆ ಮಾಡಕೂಡದೆಂದೂ ತಾನು ಭಾಗ್ಯ ಕೂಡಿ ಮಾತನಾಡಿದ ಮೇಲೆ ಮುಂದಿನ ಕೆಲಸ ಪ್ರಾರಂಭಿಸಬೇಕೆಂದು ಮಾಧು ಹೇಳಿದ. ಅವನ ಹಟ ಬಲವಾಗಲು ಅವರೂ ಕೂಡ ಆಗಲಿ ಎಂದರು.

ಇದಾದ ಕೆಲವು ದಿನಗಳೊಳಗಾಗಿಯೇ ತಮ್ಮ ಮನೆಯಲ್ಲಿ ಹಬ್ಬವೆಂಬ ನೆಪ ಹೇಳಿ ಶಾರದಮ್ಮ, ಭಾಗ್ಯ, ಸೀತೆ ಮತ್ತು ಶೇಷಮ್ಮನವರನ್ನು ಕರೆದರು. ಸೀತಾಲಕ್ಷ್ಮಿ ಮುಟ್ಟಾದುದರಿಂದ ಹೋಗಲಿಲ್ಲ. ಶೇಷಮ್ಮ ಭಾಗ್ಯ ಇಬ್ಬರೇ ಹೋದರು. ಹಬ್ಬದ ಹೆಸರಿನಲ್ಲಿ ಭಾಗ್ಯಳ ಜತೆ ಮಾತನಾಡಲು ಹೀಗೆಮಾಡಿದ್ದು.

ಶೇಷಮ್ಮ ಶಾರದಮ್ಮನವರೊಂದಿಗೆ ತಿರುಪತಿ ವಿಚಾರ ಮಾಡುತ್ತಾ ಕುಳಿತರು. ಭಾಗ್ಯ, ಮಾಧುವಿನ ಇಬ್ಬರು ತಂಗಿಯರ ಹತ್ತಿರ ಹರಟುತ್ತಾ ಕುಳಿತಿದ್ದಳು. 'ಮದುವೆಯಾದ ಮೇಲೆ ತಾವು ತಮ್ಮ ಗಂಡಂದಿರು ತಪ್ಪು ನಡೆದರೂ ನೋಡುತ್ತಾ ಕುಳಿತಿರಬೇಕೋ ಇಲ್ಲವೇ ಪ್ರತಿಭಟಿಸಬೇಕೋ' ಎಂಬ ವಿಚಾರವನ್ನು ತರ್ಕಿಸುತ್ತಿದ್ದರು.

ಅಲ್ಲಿಗೆ ಮಾಧುವೂ ಬಂದ. ಆಗ ಅವನ ಚಿಕ್ಕ ತಂಗಿ ಮಾಧುವನ್ನೇ ಕೇಳೋಣ ಅವನು ಏನು ಹೇಳುತ್ತಾನೆ ನೋಡೋಣಾ ಎಂದು ಈ ಪ್ರಶ್ನೆ ಹಾಕಿದಳು.

'ಒಬ್ಬರನ್ನೊಬ್ಬರು ತಿಳಿದುಕೊಳ್ಳದೆ ಮದುವೆಯಾದರೆ ಈ ಭಯಂಕರ ಚಿತ್ರಗಳು ಗೋಚರವಾಗುವುವು ಅದರ ಬದಲು ಗಂಡನ ಮನಸ್ಸನ್ನು ಚೆನ್ನಾಗಿ ಅರಿತ ಹೆಂಡತಿ, ಹೆಂಡತಿಯ ಮನಸ್ಸನ್ನು ತಿಳಿದ ಗಂಡನ ಸಂಸಾರದಲ್ಲಿ ಈ ಪ್ರಶ್ನೆಯೇ ತಲೆ ಹಾಕುವುದಿಲ್ಲಾ' ಎಂದ ಮಾಧು.

ಸುಮ್ಮನೆ ಇದ್ದ ಭಾಗ್ಯ ಹಾಗಾದರೆ ಒಬ್ಬರ ಮನಸನ್ನು ಒಬ್ಬರು ತಿಳಿಯುವುದು ಹೇಗೆ ? ' ಎಂದಳು.

'ಮದುವೆಗೆ ಮುಂಚೆ ಕೆಲವು ದಿನ ಭಾವೀ ದಂಪತಿಗಳು ಒಟ್ಟಿಗಿರಬೇಕು. ಅದೇ ಸಂದರ್ಭದಲ್ಲಿ ತಮ್ಮ ವಿಷಯದಲ್ಲಿ ತಮ್ಮ ಜನರಾಡುವ ಮಾತುಗಳನ್ನು ಅವು ಎಷ್ಟರಮಟ್ಟಿಗೆ ನಿಜವೆಂಬುದನ್ನು ಒಬ್ಬರು ಇನ್ನೊಬ್ಬರಿಗೆ ತಿಳಿಸಬೇಕು.'

'ಹಾಗೆಲ್ಲಾ ಎಲ್ಲರ ಮದುವೇಲೂ ಆಗುವುದಿಲ್ಲಾ' ಎಂದಳು ಮಾಧುವಿನ ತಂಗಿ.

'ಯಾರ ಮದುವೇಲಿ ಆಗಲಿ ಬಿಡಲಿ ನಾನಂತೂ ನನ್ನ ಮದುವೇಲಿ ಈ ರೀತಿಯನ್ನೇ ಅನುಸರಿಸುತ್ತೇನೆ.'

'ನಿಮ್ಮ ಈ ಪ್ರಯತ್ನಗಳು ಸಫಲವಾಗಲಿ' ಎಂದು ಭಾಗ್ಯ ಮೆಲ್ಲನೆ ನಕ್ಕಳು.

* * * *

ಭಾಗ್ಯ ಮತ್ತು ಮಾಧುವಿನ ಸ್ನೇಹ ಬೆಳೆಯತೊಡಗಿತು. ಅವನ ಇಬ್ಬರು ತಂಗಿಯರು ಬಹಳ ಚುರುಕು. ಅವನ ಇಂಗಿತವನ್ನರಿತು, ಭಾಗ್ಯಳನ್ನು ಹೇಗಾದರೂ ಮಾಡಿ ತಮ್ಮ ಮನೆಗೆ ಕರೆದುಕೊಂಡು ಬರುತ್ತಿದ್ದರು. ದೊಡ್ಡವಳಾದ ಪದ್ಮಳಂತೂ ಬೇಗನೆ ಅವಳೊಡನೆ ಆತ್ಮೀಯತೆಯನ್ನು ಪಡೆದಿದ್ದಳು. ಇದರಿಂದ ಮಾಧುವಿಗೆ ಭಾಗ್ಯಳ ಜೊತೆ ಇರಲು ಹೆಚ್ಚು ಅವಕಾಶ ದೊರೆಯುತ್ತಿತ್ತು.

ಶಾರದಮ್ಮ ಮಾಧುವಿನ ಅಭಿಪ್ರಾಯವನ್ನು ಕೇಳದೆಯೇ ಪಾರ್ವತಮ್ಮನವರ ಹತ್ತಿರ ಮಾತುಕತೆಯಾಡಲು ನಿರ್ಧರಿಸಿದರು. ರಂಗೈಯಶೆಟ್ಟರಿಗೆ ಮಾತ್ರ ಇದು ತಿಳಿದಿತ್ತು. ಅವರೂ ಸಂತೋಷದಿಂದ ವಿಚಾರವನ್ನು ಪಾರ್ವತಮ್ಮನವರಿಗೆ ತಿಳಿಸಿದರು. ಭಾಗ್ಯಳು ಒಪ್ಪಿದರೆ ಮದುವೆಯಾದ ಹಾಗೆಯೇ ಎಂದರು ಅವರು.

ಮಧ್ಯಾಹ್ನದ ಹೊತ್ತಿಗೆ ತಮ್ಮ ನಿರ್ಧಾರವನ್ನು ಮಾಧುವಿಗೂ ತಿಳಿಸಿದರು. ಹಾಗೆ ಮಾಡಕೂಡದೆಂದೂ ತಾನೇ ಭಾಗ್ಯಳನ್ನು ಕೇಳುವೆನೆಂದೂ ಮಾಧು ನುಡಿದ. ಆದರೆ ರಂಗಯ್ಯರ ಮತ್ತು ಶಾರದಮ್ಮನವರ ಬಾಯಿ ಜೋರಾಗುತ್ತಲಿದ್ದ ಗೊಣಗುಟ್ಟುತ್ತಾ ಹಾಗೆಯೇ ಆಗಲಿ, ಆದರೆ ನಾನು ನಿಮ್ಮ ಜೊತೆ ಬರುತ್ತೇನೆ ಎಂದ.

ಇದು ಭಾಗ್ಯಳಿಗೂ ತಿಳಿಯಿತು. ಹಿಂದೆ ತಾನು ಮದುವೆ ಮಾಡಿಕೊಳ್ಳಬಾರದೆಂದು ಮಾಡಿದ್ದ ಪ್ರತಿಜ್ಞೆಯು ಅವಳ ಮುಂದೆ ಬಂದುನಿಂತಿತು. ಮಾಧುವಿನ ಸೌಜನ್ಯ ಅವನ ಹಿರಿಯ ಗುಣಗಳ ಮುಂದೆ ಅವಳ ಪ್ರತಿಜ್ಞೆ ಹಿಂದುವರಿಯತೊಡಗಿತು. ನಿತ್ಯವೂ ಕಾಲೇಜು ಮುಗಿದ ನಂತರ ಮಾಧುವಿನೊಡನೆ ಮಾತನಾಡಲು ಅವಳ ಮನಸ್ಸು ಹಾತೊರೆಯುತ್ತಿತ್ತು. ಪ್ರಶಾಂತರಾಗಿ ಬಹಳ ದೀರ್ಘವಾದ ಸಮಸ್ಯೆಗಳನ್ನು ಇಬ್ಬರೂ ನಿತ್ಯವೂ ಚರ್ಚಿಸುತ್ತಿದ್ದರು. ಚರ್ಚೆಯ ಪ್ರಾರಂಭವನ್ನೇನೋ ಪದ್ಮ ಆರಂಭಿಸುತ್ತಿದ್ದಳು. ಅದು ಪ್ರಾರಂಭವಾದೊಡನೆಯೇ ಮೆಲ್ಲನೆ ತನ್ನ ತಂಗಿಯೊಡನೆ ನುಣಿಚಿಕೊಂಡು ಭಾಗ್ಯ ಮಾಧುವಿನಿಂದ ಬೇರೆಯಾಗುತ್ತಿದ್ದಳು. ಹೀಗಾಗಿ ಅವರು ಒಬ್ಬರನ್ನೊಬ್ಬರು ಬಹಳ ನಿಕಟವಾಗಿ ನೋಡಲಾರಂಭಿಸಿದರು. ಭಾಗ್ಯಳ ಪ್ರೇಮ ಮೊಳಕೆಗೊಂಡಿತು. ಅದಕ್ಕೆ ಮಾಧುವಿನ ಆಕರ್ಷವ್ಯಕ್ತಿತ್ವವೇ ಕಾರಣವಾಗಿತ್ತು.

ಸಾಯಂಕಾಲದ ಹೊತ್ತಿಗೆ ಶಾರದಮ್ಮನವರೂ ಮಾಧುವೂ ರಂಗೈಯ ಶೆಟ್ಟರ ಮನೆಗೆ ಬಂದರು. ಕೂಡಲೇ ಭಾಗ್ಯ ಮತ್ತು ಪಾರ್ವತಮ್ಮನವರನ್ನು ಶೆಟ್ಟರು ಕರೆಸಿಕೊಂಡರು. ಉಪಚಾರದ ಮಾತುಕತೆಗಳಾದ ಮೇಲೆ ಶಾರದಮ್ಮ ಪಾರ್ವತಮ್ಮನವರನ್ನುದ್ದೇಶಿಸಿ ನುಡಿದರು. 'ನಿಮ್ಮ ಸಂಬಂಧ ಬೆಳಸೋಣ ಎಂದು ನಮಗೆ ಬಹಳ ಆಸೆ ಆಗಿದೆ....ಜೊತೆಗೆ ನಮ್ಮ ಮಾಧು ಭಾಗ್ಯಲಕ್ಷ್ಮೀನೇ ಮದುವೆಯಾಗಬೇಕೆಂದಿದ್ದಾನೆ....'

'ನನ್ನದೇನೂ ಈ ವಿಷಯದಲ್ಲಿ ಅಭ್ಯಂತರವಿಲ್ಲ....ಆದರೆ ವಿಚಾರವನ್ನು ನನ್ನ ಮಗಳಿಗೇ ಬಿಟ್ಟಿದ್ದೇನೆ....ಅವಳು ಒಪ್ಪಿದರೆ ಮುಂದಿನದು ಈಕ್ಷಣ ನಡೆಸಬಹುದು.'

'ಭಾಗ್ಯಲಕ್ಷ್ಮಿ ಅಭಿಪ್ರಾಯಾನೇ ಕೇಳಮ್ಮಾ; ಮುಖ್ಯ ಅದೇ ತಾನೇ' ಎಂದ ಮಾಧು.

'ಭಾಗ್ಯಲಕ್ಷ್ಮಿ ನಿನ್ನ ಮನಸ್ಸು ಹೇಗಿದೆಯಮ್ಮಾ....ನಮ್ಮ ಹುಡುಗ ನೇನೋ ಒಳ್ಳೆಯವನು... ನಿನಗೆ ಗೊತ್ತಿದೆಯಲ್ಲಾ....ಏಕೆಂದರೆ ಇಬ್ಬರೂ ಬಹಳ ಮಾತನಾಡಿದ್ದೀರಾ....ನಿನ್ನ ಇಚ್ಛೇನ ಹೇಳು'

ಭಾಗ್ಯ ಬಹಳ ಹೊತ್ತು ಯೋಚಿಸುತ್ತಾ ಕುಳಿತಳು. ಈ ವಿಚಾರ ವನ್ನು ಅನೇಕ ದಿನಗಳಿಂದ ಯೋಚಿಸುತ್ತಿದ್ದಳು. ಮಾಧುವಿನ ಪರಿಚಯ ವಾದಂದಿನಿಂದಲೂ ಅವಳಿಗೆ ರಾತ್ರಿ ಹೊತ್ತು ಸರಿಯಾಗಿ ನಿದ್ರೆಯೇ ಬರು ತ್ತಿರಲಿಲ್ಲ. ಕೊನೆಗೆ 'ನಾನೇನೋ ಮದುವೆಯನ್ನು ಮಾಡಿಕೊಳ್ಳಬಾರದೆಂ ದಿದ್ದೆ....' ಎಂದಳು.

'ಕಾರಣವೇನು....ಹೇಳಬಹುದೇ' ಎಂದ ಮಾಧು.

ಶಾರದಮ್ಮನವರೂ ಪಾರ್ವತಮ್ಮನವರೂ ಹೊರಗೆ ಎದ್ದು ಬಂದರು. ರಂಗೈಯ ಶೆಟ್ಟರು ಬರುವಾಗ ಬಾಗಿಲನ್ನು ಎಳೆದುಕೊಂಡೂ ಬಂದರು.

ಎಲ್ಲರೂ ಹೋದ ಮೇಲೆ ಭಾಗ್ಯ ತಾನು ಮದುವೆಯಾದರೆ ತನ್ನ ತಾಯಿಗೆ ಆಗುವ ಅಪಾರ ಕಷ್ಟಗಳನ್ನು ವರ್ಣಿಸಿ, ಅದಕ್ಕೋಸ್ಕರ ಅವಿ ವಾಹಿತಳಾಗಿರಬೇಕೆಂದು ಹಿಂದೆ ಮನಸ್ಸು ಮಾಡಿದ್ದನ್ನು ತಿಳಿಸಿದಳು.

ಮಾಧು ಎಲ್ಲವನ್ನೂ ನಿಧಾನವಾಗಿ ಅಲೋಚಿಸಿದ. ಆಮೇಲೆ ಈ ವಿಷಯವನ್ನು ಬೇರೆ ರೀತಿಯಲ್ಲಿ ಇತ್ಯರ್ಥಗೊಳಿಸುವುದು ಅಸಾಧ್ಯವೇ' ಎಂದ.

'ಹಾಗೆಂದರೆ?'

'ನಿಮ್ಮ ಮದುವೆಯಾದನಂತರ, ನೀವೇನೂ ನಿಮ್ಮ ತಾಯಿಯನ್ನ ಗಲಬೇಕಾಗಿಲ್ಲ....ನಿಮ್ಮ ತಾಯಿಯೂ ನಿಮ್ಮ ಜೊತೆಯಲ್ಲಿಯೇ ನಮ್ಮ ಮನೆಗೆ ಬರಲಿ'

'ಹಾಗೆ ಕೇಳಿಕೊಳ್ಳಲು ನನಗೆ ಮನಸ್ಸಿಲ್ಲಾ.'

'ಈ ವಿಚಾರ ನೀವು ಯೋಚಿಸಬೇಡಿ .... ಒಂದು ವೇಳೆ ನಿಮ್ಮ ತಾಯಿಗೆ ನಮ್ಮ ಮನೆಯಲ್ಲಿರಲು ಇಷ್ಟವಿಲ್ಲದಿದ್ದರೆ ನಮ್ಮ ಮನೆಯ ಹತಿ ರಲೇ ಒಂದು ಮನೆ ಮಾಡೋಣ....ಅಲ್ಲಿಯೇ ಅವರು ಇರಲಿ....ಹೆಚ್ಚು ಹೊತ್ತು ನೀವು ಅಲ್ಲಿಯೇ ಇರಬಹುದು—ಈಗಲಾದರೂ ನೀವು ಒಪ್ಪುವಿರೋ'

ಭಾಗ್ಯ ಮಾತಾಡಲಿಲ್ಲ....ತಲೆತಗ್ಗಿಸಿ ಕುಳಿತಳು.

"ನೀವು ಹಾಸ್ಯ ಮಾಡಬಹುದು....ಆದರೆ ನಿಮ್ಮ ಜೊತೆಯ ನನ್ನ ಭಾವೀ ವಿಷಯವಾಗಿ ಬಹಳ ಯೋಚಿಸಿದ್ದೇನೆ. ಆಗಲೇ ನಿಮಗೂ ತಿಳಿದಿ

ರಬಹುದು ನನ್ನ ಜೀವನದ ಮುಖ್ಯ ಗುರಿ ಉದ್ದೇಶಗಳಾಗುವುವೆಂಬುದು.. ಅದಕ್ಕೆ ವಿದ್ಯಾವಂತರಾದ ನೀವು ನನಗೆ ಸರಿಯಾದ ಜೊತೆ—'ಎಂದ ಮಾಧು.

'ನೀವು ಹೇಳುವುದು ನನಗೂ ಗೊತ್ತಾಯಿತು. ನೀವು ಮೊದಲನೆಯ ದಿನವೇ ಹೇಳಿದಿರಲ್ಲಾ. ಒಬ್ಬರ ಮನಸ್ಸನ್ನು ಇನ್ನೊಬ್ಬರು ತಿಳಿದುಕೊಂಡು ವಿವಾಹವಾಗಬೇಕೆಂದು....ಅಂತೆಯೇ ನಿಮ್ಮ ವಿಷಯ ತಿಳಿಯಲು ಪ್ರತಿನಿತ್ಯವೂ ಪ್ರಯತ್ನಿಸುತ್ತಿದ್ದೇನೆ.'

'ನನ್ನ ವಿಷಯ ಬೇಕಾದಷ್ಟಿದೆ—ಗಂಟೆಗೆ ಎರಡು ಸಿಗರೇಟ್ ಪ್ಯಾಕ್ ಖಾಲಿ ಮಾಡುತ್ತೇನೆ. ದಿನಕ್ಕೆ ಇಪ್ಪತ್ತು ಸಲ ಕ್ರಾಪ್ ಬಾಚುತ್ತೇನೆ'

'ಸರಿ ಸರಿ ನನಗೂ ಎಲ್ಲಾ ಗೊತ್ತು—ಆದರೆ ನಮ್ಮ ತಾಯಿದು ಮುಖ್ಯ ಯೋಚಿಸಬೇಕಾಗಿದೆ'

'ಆ ವಿಚಾರ ಸರಿಹೋದರೆ ನೀವು ಒಪ್ಪಿದ ಹಾಗೆ ತಾನೇ'

ಭಾಗ್ಯಳಿಗೆ ನಾಚಿಕೆಯಾಯಿತು. ಕೆನ್ನೆಗಳಲ್ಲಿ ರಕ್ತ ಮೂಡಿತು. ಚಿಲಕದ ಶಬ್ದ ಹೊರಗಾಗುತ್ತಲೂ ಬಂದೆ ಎನ್ನುತ್ತಾ ಎದ್ದು ಹೊರಗೆ ಹೋದಳು.

ಕುತೂಹಲದಿಂದ ಕಾಯುತ್ತಾ ಹೊರಗಿದ್ದವರಿಗೆ ಇನ್ನೂ ಬಹಳ ವಿಷಯಗಳನ್ನು ಯೋಚಿಸಬೇಕೆಂದು ಮಾಧು ಹೇಳಿದನು.

ಮದುವೆಯಾಗಲು ಹುಡುಗಿ ಒಪ್ಪಿದ್ದಾಳೋ ಇಲ್ಲವೋ ಎನ್ನಲು 'ಬಹಳ ಯೋಚಿಸಬೇಕಂತೆ' ಎಂದು ಶಾರದಮ್ಮನವರು ಸ್ವಲ್ಪ ಮನಸ್ಸು ಕಹಿಕಹಿ ಮಾಡಿಕೊಂಡರು.

ಅವರೆಲ್ಲರೂ ಹೋದ ಮೇಲೆ ಭಾಗ್ಯ ತಾನು ಹೇಳಿದ ಉತ್ತರವನ್ನು ಪಾರ್ವತಮ್ಮನವರಿಗೆ ತಿಳಿಸಿದಳು.

ಭಾಗ್ಯ, ನನ್ನ ಯೋಚನೆ ಬಿಡಮ್ಮಾ. ಎರಡು ತುತ್ತು ಊಟ ಸಿಕ್ಕಿದ ಕಡೆ ನನ್ನ ಜೀವ ಕಳೆದು ಹೋಗುವುದು. ನೀನು ಚೆನ್ನಾಗಿ ಬಾಳಿ ಬದುಕ ಬೇಕು....ಆದುದರಿಂದ ನೀನು ಒಪ್ಪಿದರೆ ಮಾತ್ರ ಮದುವೆಯು ನಡೆಯಬೇಕು' ಎಂದರು.

'ಆಗಲಿ ತಾಳಮ್ಮಾ, ಇನ್ನೆರಡು ದಿನ ತಳ್ಳಲಿ....ಆ ಮೇಲೆ ಉತ್ತರ ಹೇಳೋಣಾ' ಎಂದಳು ಭಾಗ್ಯ.

* * * *

ಪ್ರಭಾ ಬಂದು ಪೀಡಿಸುತ್ತಾಳೆ ಎಂಬ ನೆಪವನ್ನಾಗಿಟ್ಟುಕೊಂಡು ಭಾಗ್ಯ ಮಾಧುವಿನ ಮನೆಗೆ ಬರುತ್ತಿದ್ದಳು. ಮಾಧು ಬಕಪಕ್ಷಿಯಂತೆ ಅವಳನ್ನೇ ನಿರೀಕ್ಷಿಸುತ್ತಿದ್ದ. ಅಂದು ಮಾತುಕತೆಗಳಾದ ಮೇಲಂತೂ ಅವರಿಬ್ಬರೂ ಬಹಳ ಅನ್ಯೋನ್ಯತೆಯಿಂದ ಮಾತನಾಡಲು ಮೊದಲು ಮಾಡಿದರು.

ಒಂದು ದಿನ ಮಾಧು, ಅವನ ತಂಗಿಯರಿಬ್ಬರು ಮತ್ತು ಭಾಗ್ಯ ಎಲ್ಲರೂ ಕಾರಿನಲ್ಲಿ ಕಬ್ಬನ್ ಪಾರ್ಕಿಗೆ ಹೋಗಬೇಕೆಂದು ನಿರ್ಧರಿಸಿದರು. ಮಾಧುವಿನ ಸಂತೋಷಕ್ಕೆ ಪಾರವೇ ಇರಲಿಲ್ಲ. ಕಾರನ್ನು ಮ್ಯೂಜಿಯಂ ಹಿಂದುಗಡೆ ನಿಲ್ಲಿಸಿದರು. ಅನಂತರ ಎಲ್ಲರೂ ಬ್ಯಾಂಡ್ ಸ್ಟಾಂಡಿನ ಕಡೆ ತೆರಳಿದರು. ಮಾಧು ಗಲಾಟೆಯಿಲ್ಲದ ಸ್ಥಳದಲ್ಲಿ ಕುಳಿತುಕೊಳ್ಳುವುದಾಗಿ ಸೂಚಿಸಿದ. ಹಾಗೆಯೇ ಬಲಗಡೆ ಸ್ವಲ್ಪ ದೂರದಲ್ಲಿದ್ದ ಮರದ ಕೆಳಗೆ ಕುಳಿತುಕೊಂಡರು. ಮೊದಲು ಎಲ್ಲರೂ ಸೇರಿ ಮಾತನಾಡಿದರು. ಮಧ್ಯೆ ಮಾಧುವಿನ ತಂಗಿಯರಿಬ್ಬರೂ ಫೌಂಟನ್ ನೋಡಿ ಬರುತ್ತೇವೆಂದು ಹೊರಟರು.

ಮಾಧು ಭಾಗ್ಯರಿಬ್ಬರೇ ದೂರದಲ್ಲಿದ್ದ ಗಿಡವನ್ನು ನೋಡುತ್ತಾ ಕುಳಿತರು.

'ನೋಡಿ ನೀವು ಆವತ್ತು ಹೇಳಿದ ವಿಷಯವನ್ನು ಸಂಪೂರ್ಣವಾಗಿ ಯೋಚಿಸಿದ್ದೇನೆ' ಎಂದ ಮಾಧು.

'ಏನು'

'ನೀವು ಮತ್ತು ನಿಮ್ಮ ತಾಯಿ ಹತ್ತಿರದಲ್ಲೇ ಒಂದು ಮನೆಯಲ್ಲಿರಬಹುದು. ನೀವು ಕೂಡ ಅನುಕೂಲವಾದಾಗಲೆಲ್ಲಾ ನಮ್ಮ ಮನೆಗೆ ಬನ್ನಿ. ಕಾಲ ಕ್ರಮೇಣದಲ್ಲಿ ಎಲ್ಲವೂ ಸರಿಯಾಗುವುದು.'

ಮಾಧುವಿನ ಅತ್ಯಂತ ವಿನಯ ಪೂರ್ವಕವಾದ ಮಾತುಗಳು ಭಾಗ್ಯಳ ಕರುಳು ಚುಚ್ಚಿದವು. ತನ್ನ ತಾಯಿಯ ಹತ್ತಿರ ಈ ವಿಷಯವನ್ನೆತ್ತಿದ್ದಕ್ಕೆ

'ಭಾಗ್ಯ ಹುಚ್ಚಿಯಂತೆ ನನ್ನ ವಿಚಾರ ಮಾತನಾಡಬೇಡ....ಎರಡು ದಿನ ನಿನ್ನ ಮನೆಯಾಯ್ತು....ಏನೋ ಕಾಲಗತಿ ಒಳ್ಳೆಯದಾಗುವ ಹಾಗೆ ಕಾಣುತ್ತದೆ. ರಾಜಶೇಖರನೂ ಬರಬಹುದು. ರಾಮುವಿನ ಮನಸ್ಸೂ ಬದಲಾಗಬಹುದು....ಅನಂತರ ಒಬ್ಬೊಬ್ಬರ ಮನೆಯಲ್ಲಿ ಎರಡೆರಡು ದಿನವಿದ್ದರೆ ನನ್ನ ಪಾಡು ಮುಗಿಯುತ್ತೆ' ಎಂದು ಒತ್ತಿ ಹೇಳಿದರು. ತಾನು ಹಿಂದೆ ಬಹಳ ಅವಸರದಲ್ಲಿ ಪ್ರತಿಜ್ಞೆ ಮಾಡಿದೆನೆಂದು ಅವಳ ಮನಸ್ಸಿಗೆ ಗೋಚರವಾಗುತ್ತಾ ಬಂದಿತ್ತು.

ಆದುದರಿಂದಲೇ ಮಾಧುವಿಗೆ 'ನೀವು ಹೇಳಿದ ಹಾಗೆಯೇ ಆಗಲಿ..' ಎಂದಳು.

ಅವನಿಗೆ ಬಹಳ ಸಂತೋಷವಾಯಿತು.

'ನಾನು ಹುಚ್ಚನೆಂದು ಬೇಕಾದರೆ ನೀವು ಭಾವಿಸಿ....ನಿಜಾಂಶವನ್ನು ಈಗ ಹೇಳುತ್ತೇನೆ. ನಿಮ್ಮನ್ನು ನೋಡಿದ ಮೊದಲನೆಯ ದಿನವೇ ನನ್ನ ಆತ್ಮದಲ್ಲಿ ನೀವೇ ನನಗೆ ಸರಿಯಾದ ಜೊತೆಗಾರರೆಂದು ಹೊಳೆಯಿತು. ಅಂದಿನಿಂದಲೂ ಹುಚ್ಚನಂತೆ ನಿಮ್ಮ ಸಂಗಕ್ಕಾಗಿ ಹಾತೊರೆಯುತ್ತಿದ್ದೇನೆ.. ಹಾಗಾದರೆ ನೀವು ಒಪ್ಪಿದ ಹಾಗೆ ತಾನೇ....' ಎಂದು ಪ್ರಶ್ನಿಸಿದನು.

ಭಾಗ್ಯಳು ಅರೆಕ್ಷಣ ಸುಮ್ಮನಿದ್ದಳು.

ಗಂಡು ಕಲ್ಲೆದೆಯವನಲ್ಲ. ಇಂತಹ ಒಂದು ಹೃದಯವೂ ಅವರಲ್ಲಿದೆ. ಅದು ಅಮರ; ಅಜೇಯ ಎಂದು ಮೊದಲಬಾರಿಗೆ ಆಕೆ ಕಂಡುಕೊಂಡಳು.

'ನಾನು ಆ ದಿನ ರಾತ್ರಿಯಿಂದ ಬಹಳ ಯೋಚಿಸುತ್ತಿದ್ದೇನೆ. ಹಿಂದೆ ನಮ್ಮ ತಾಯಿಯ ಕಷ್ಟವನ್ನು ನೋಡಲಾರದೆ ಮದುವೆಯಾಗಬಾರದೆಂದು ಮಾಡಿದ್ದೆ. ಆದರೆ ನೀವು ನನ್ನ ಜೀವನದಲ್ಲಿ ಒಂದು ಕಲಮಲವನ್ನೆಬ್ಬಿಸಿದಿರಿ. ಪ್ರಶಾಂತವಾದ ಸಾಗರದಲ್ಲಿ ಮಹೋನ್ನತವಾದ ಚಂಡಮಾರುತವನ್ನೆಬ್ಬಿಸಿದಿರಿ. ಆ ಚಂಡಮಾರುತದಲ್ಲಿ ನನ್ನ ಪ್ರತಿಜ್ಞೆ ಎತ್ತಲೋ ಮಾಯವಾಯಿತು. ನನ್ನ ಭಾವೀ ಜೀವನದ ವಿಚಾರವಾಗಿಯೂ ಬಹಳ ಯೋಚಿಸಿದ್ದೇನೆ. ನಿಮ್ಮ ಅಭಿಪ್ರಾಯಗಳು ನನಗೆ ಒಪ್ಪಿಗೆಯಾಗಿರುವುದರಿಂದ ನನ್ನ ಮನಸ್ಸನ್ನು ಬದಲಾಯಿಸಿದ್ದೇನೆ.'

'ನಿಮ್ಮದು ದೊಡ್ಡ ಮನಸ್ಸು..'ಹೂ' ಎಂದು ಹತಾಶನಾಗುತ್ತಿದ್ದ ನನ್ನನ್ನು ಹಿಡಿದೆಬ್ಬಿಸಿದಿರಿ. ನಮ್ಮ ಜೀವನದಲ್ಲಿ ಏನೊಂದೂ ವೈಮನಸ್ಸುಗಳು ಬಾರದಿರಲು ಯತ್ನಿಸೋಣಾ' ಹೀಗೆಂದು ತಿರುಗಿ ನೋಡುತ್ತಾ ' ಓ! ಅವರಿಬ್ಬರೂ ಬಂದು ಬಿಟ್ಟರು.' ಎಂದ.

ಭಾಗ್ಯಳ ಕತ್ತು ತಗ್ಗಿತ್ತು. ಅವನು ಹಾಗೆಂದೊಡನೆಯೇ ಸರಕ್ಕನೆ ತಲೆಯೆತ್ತಿದಳು. ಕಣ್ಣಿನ ಮೂಲೆಯಲ್ಲಿ ಮೂಡಿದ್ದ ಎರಡು ಹನಿಗಳೂ ಬಳಬಳನೆ ಉರುಳಿದವು. ಮಾಧುವಿನಮನಸ್ಸೂ ಕರಗಿತು. ಜೋಬಿನಲ್ಲಿದ್ದ ಕರವಸ್ತ್ರದಿಂದ ಅವಳ ಕಣ್ಣೀರನ್ನು ಒರೆಸಲು ಮುಂದೆ ಕೂತ. ಆದರೆ ಭಾಗ್ಯ ತಾನೇ ತನ್ನ ಕಣ್ಣೀರನ್ನು ಒರೆಸಿಕೊಂಡಳು. ಅಷ್ಟರಲ್ಲಿ ಅವನ ತಂಗಿಯರೂ ಹತ್ತಿರ ಬಂದರು. ಆಗ 'ಏನು ಗಾಳಿಯಪ್ಪಾ' ಎನ್ನುತ್ತಾ ತನ್ನ ಕಣ್ಣನ್ನು ಭಾಗ್ಯ ಚೆನ್ನಾಗಿ ಒರೆಸಿಕೊಂಡಳು. ಅನಂತರ ಎಲ್ಲರೂ ಸಮೀಪದಲ್ಲಿದ್ದ ಹೋಟಲಿಗೆ ತೆರಳಿದರು.

ಭಾಗ್ಯಳ ಮನಸು ಅಲ್ಲೋಲಕಲ್ಲೋಲವಾಗಿತ್ತು. ಮಾಧುವಿಗೆ ತನ್ನ ಹೃದಯವನ್ನೇ ಧಾರೆ ಎರೆಯಲು ನಿರ್ಧರಿಸಿದಳು. ಪಕ್ಕದ ಮನೆಗೆ ಹೋಗಿದ್ದ ಪಾರ್ವತಮ್ಮ ಬಂದಮೇಲೆ ಗಳಗಳನೆ ಅತ್ತುಬಿಟ್ಟಳು. ಅವರಿಗೆ ಆಶ್ಚರ್ಯವಾಯಿತು. ಎಂದೂ ಕಣ್ಣೀರು ಸುರಿಸದೆ ಇದ್ದ ಭಾಗ್ಯ ಇಂದು ಅಳುತ್ತಿದ್ದುದು ಅವರಿಗೆ ಘಾಬರಿಯನ್ನೂ ಉಂಟು ಮಾಡಿತು. ಮೆಲ್ಲನೆ ಯಾಕೆ ಭಾಗ್ಯ ಅಳುತ್ತಿದ್ದೀಯೊ ಎಂದು ತಲೆನೇವರಿಸಿದರು. ಭಾಗ್ಯ ಬಿಕ್ಕುತ್ತಾ ತಾನು ಮಾಧುವಿಗೆ ಕೊಟ್ಟ ವಚನವನ್ನು ಹೇಳಿ ತನ್ನ ತಾಯಿಯ ಕ್ಷಮೆ ಬೇಡಿದಳು.

' ಹುಚ್ಚಿಯಂತೆ ಮಾತಾಡಬೇಡ. ಸದ್ಯ ನೀನು ಒಂದು ಉತ್ತರ ಹೇಳಿದ್ದು ಒಳ್ಳೆಯದಾಯಿತು. ನಿನ್ನ ಶ್ರೇಯಸ್ಸು ಮುಖ್ಯವಮ್ಮಾ. ಒಳ್ಳೆಯ ಕೆಲಸವನ್ನೇ ಮಾಡಿದೆ' ಎಂದರು ಪಾರ್ವತಮ್ಮ.

ಕೆಲವು ದಿನಗಳೊಳಗಾಗಿಯೇ ಭಾಗ್ಯ ಮಾಧುರ ಮದುವೆಯು ಸಾಗಿತ್ತು. ಮದುವೆಗೆ ರಾಮಪ್ಪನೂ ಬರಲಿಲ್ಲ. ಸುಶೀಲನನ್ನು ಕಳುಹಿಸಲೂ ಇಲ್ಲ. ಹೆಣ್ಣಿನ ಕಡೆ ಸೀತಾಲಕ್ಷ್ಮಿಯದೇ ಓಡಾಟ.

ಹೆಣ್ಣನ್ನು ಒಪ್ಪಿಸುವ ಕಾಲಕ್ಕೆ ಪಾರ್ವತಮ್ಮನವರ ಜಂಘಾ ಬಲ ವೆಲ್ಲಾ ಬಿದ್ದುಹೋದುವು. ಕಣ್ಣುಗಳಿಂದಲೂ ಕಣ್ಣೀರಿನ ಕೋಡಿ ಹರಿಯ ಲಾರಂಭಿಸಿದವು.

ಭಾಗ್ಯ 'ಅಮ್ಮಾ ನನ್ನ ತಪ್ಪು ಕ್ಷಮಿಸಮ್ಮಾ....' ಎಂದು ಗದ್ಗದ ಸ್ವರದಲ್ಲಿ ಕೇಳಿಕೊಂಡಳು.

'ಅಯ್ಯೋ ನನ್ನ ಚಿನ್ನಮ್ಮಣ್ಣಿ ನೀನು ನನ್ನ ತಪ್ಪನ್ನು ಕ್ಷಮಿಸ ಬೇಕು. ದೊರೆಯ ಹೆಂಡತಿಯಾಗುವವಳನ್ನು ಬಿಕಾರಿಯ ಮಗಳನ್ನಾಗಿ ಸಾಕಿದೆ' ಎಂದರು.

ಸೀತಾಲಕ್ಷ್ಮಿ ತನ್ನ ಕಣ್ಣೀರನ್ನು ಒರೆಸಿಕೊಂಡಳು. 'ಈ ಹಬ್ಬ ನೋಡಬೇಕಾದವರೇ ಇಲ್ಲವಲ್ಲಾ .... ಅವರು ಇದ್ದಿದ್ದರೆ ಎಷ್ಟು ಸಂತೋಷ ಪಡುತ್ತಿದ್ದರೋ' ಎಂದು ಮತ್ತಷ್ಟು ಕಂಬನಿಗರೆದರು.

* * * *

ಅಂತೂ ಮದುವೆಯು ಮುಗಿಯುತ್ತಲೂ ಪಾರ್ವತಮ್ಮನವರು ಸೀತಾಲಕ್ಷ್ಮಿಯೊಡನೆ ಲಕ್ಷ್ಮಣರಾಯರ ನಿವಾಸದ ಮಗ್ಗುಲಲ್ಲಿ ತಿರಳಿದರು.

## ಹನ್ನೆರಡು

ಭಾಗ್ಯಳ ಮದುವೆಯಾದರೂ ಪಾರ್ವತಮ್ಮನವರ ಯೋಚನೆಗಳೇನೂ ಕಮ್ಮಿಯಾಗಲಿಲ್ಲ. ಅವಳ ವಿಚಾರದಲ್ಲಿ ಮಾತ್ರ ಅವರೇನೂ ಯೋಚಿಸ ಬೇಕಾಗಿರಲಿಲ್ಲ. ಭಾಗ್ಯ ಮತ್ತು ಮಾಧುವಿನ ಅನ್ಯೋನ್ಯತೆಯು ಅವ ರಿಗೆ ಅಚ್ಚರಿಯನ್ನುಂಟು ಮಾಡಿತು. ಲಕ್ಷ್ಮಣರಾಯರ ಮನೆ ಪಾರ್ವತಮ್ಮ ನವರ ಮನೆ ಕ್ರಮೇಣ ಎಲ್ಲವೂ ಒಂದೇ ಆದವು.

ಆದರೆ ರಾಮು ಮತ್ತು ಸೀತೆಯ ವಿಚಾರ ಅವರನ್ನು ಬಹಳ ಯೋಚನಾಪರರನ್ನಾಗಿ ಮಾಡಿತು. ಭಾಗ್ಯಳ ಮದುವೆಗೆ ಸುಶೀಲ ಹೋಗ ಬೇಕೆಂದು ಬಹಳ ಪ್ರಯತ್ನಪಟ್ಟಳು. ಆದರೆ ಅದು ಸಫಲವಾಗಲಿಲ್ಲ.

ಮದುವೆಯ ವೇಳೆಗೆ ಅವಳಿಗೆ ಆರು ತಿಂಗಳು. ಅಲ್ಲದೆ ರಾಮುವು ಕೆಮ್ಮುತ್ತಾ ಮನೆಯಲ್ಲೇ ಇರುತ್ತಿದ್ದ. ಅವರೇ ಬಂದು ಮದುವೆಗೆ ಬರಬೇ ಕೆಂದು ಕೇಳಿಕೊಂಡರು. ಖಡಾ ಖಂಡಿತವಾಗಿ ಬರುವುದಿಲ್ಲವೆಂದು ಉತ್ತರ ವಿತ್ತು ಕಳುಹಿಸಿದ. ಹೋಗಕೂಡದೆಂದು ಹೆಂಡತಿಗೂ ಆಜ್ಞೆಯಿತ್ತ.

ರಾಮುಪ್ಪ ಬೇರೆ ರೂಮಿಗೆ ತೆರಳಿದನಂತರ ಸುಶೀಲೆ ಸುಮ್ಮನೆ ಕಣ್ಣೀರು ಹಾಕಿದಳು. ಅವಳನ್ನು ನೋಡಿದ ಪಾರ್ವತಮ್ಮನವರ ಎದೆ ಬಿರಿಯಿತು. 'ಸುಶೀಲಾ ಎಷ್ಟು ತೇದು ಹೋಗಿದ್ದೀಯಮ್ಮಾ !!' ಎಂದು ಹತ್ತಿರ ಕರೆದು ತ್ಯೈದಡವಿದರು.

'ಅತ್ತೆ! ನಿಜವಾಗಿಯೂ ಭೂಮಿಯ ಮೇಲೆ ಇಲ್ಲಾ........ಸುಮ್ಮನೆ ಕಾಲ ದಬ್ಬುತ್ತಿದ್ದೇನೆ.'

ಸುಶೀಲಳ ಬಳೆಗಳನ್ನು ನೋಡುತ್ತಾ 'ಕಡ್ಡಿಯಂತೆ ಆಗಿದ್ದೀಯಲ್ಲಮ್ಮಾ........ಅಯ್ಯೋ! ಅದೇನು ಕತ್ತಿನ ಹತ್ತಿರ ಗುರುತು........' ಎಂದರು. 'ಅದೇ, ಅತ್ತೆ ನನ್ನ ಜೀವನ ಯಾತ್ರೆಯ ಚಿತ್ರದ ಒಂದು ಚಿನ್ಹೆ' ಎಂದು ಕಣ್ಣಲ್ಲಿ ನೀರು ಸುರಿಸಿದಳು. ಹಾಗೆಯೇ ಮಾತನಾಡುತ್ತಾ 'ಇವೆಲ್ಲವರ ಜೊತೆಗೆ ನನಗೆ ಈಗ ಆರು ತಿಂಗಳು ಬೇರೆ' ಎಂದಳು.

ರಾಮುಪ್ಪ ಬಂದುದರಿಂದ ಮಾತನಾಡುವುದನ್ನು ನಿಲ್ಲಿಸಬೇಕಾಯಿತು. ಪಾರ್ವತಮ್ಮನವರೂ ಬಹಳ ಬಗೆಯಿಂದ ರಾಮುಪ್ಪನನ್ನು ಪ್ರಾರ್ಥಿಸಿಕೊಂಡರು. ಆದರೂ ಅವನು ಅದಕ್ಕೆ ಕಿವಿಯನ್ನೇ ಕೊಡಲಿಲ್ಲ. ಹೊರಡುವ ಮುನ್ನ ಸುಶೀಲ, 'ಭಾಗ್ಯಳಿಗೆ ನನ್ನನ್ನು ಜ್ಞಾಪಿಸಿ. ಅಷ್ಟೇ, ಅತ್ತೇ' ಎಂದು ಕೇಳಿಕೊಂಡಳು. ಪೆಚ್ಚು ಮೋರೆ ಹೊತ್ತುಕೊಂಡು ಪಾರ್ವತಮ್ಮ ಹಿಂದಿರುಗಿದರು.

ಸೀತೆಯ ಗಂಡನಿಂದ ಕಾಗದವೇನೂ ಬಂದಿರಲಿಲ್ಲ ಆಕೆ ಯಾವಾಗಲೂ ಕೊರಗುತ್ತಲೇ ಇರುತ್ತಿದ್ದಳು. ಸೀತಾ 'ಯೋಚನೆ ಮಾಡಬೇಡ. ಇಂದಲ್ಲಾ ನಾಳೆ ರಾಜು ಬಂದೇ ಬರುವನು' ಎಂದು ಪಾರ್ವತಮ್ಮ ಸಮಾಧಾನ ಮಾಡುತ್ತಿದ್ದರು. ಆದರೆ ಅಷ್ಟು ಹೇಳುತ್ತಿದ್ದ ಅವರೇ ಬಹಳ ಯೋಚಿಸಿದ್ದರು.

ಇವೆಲ್ಲದರ ಮಧ್ಯೆ ಪಾರ್ವತಮ್ಮನವರ ಆರೋಗ್ಯವೇ ಸಂಪೂರ್ಣವಾಗಿ ಕೆಟ್ಟುಹೋಗಿತ್ತು. ಮಾಧು ಅತ್ತೆಗೆ ಡಾಕ್ಟರ ಮೂಲಕ ಔಷಧಿ ಕೊಡಿಸುತ್ತಿದ್ದ. ಭಾಗ್ಯಳಂತೂ ತಾಯಿಯ ಹತ್ತಿರಲೇ ಇರುತ್ತಿದ್ದಳು.

ಸುಶೀಲಳು ಎಂಟನೆಯ ತಿಂಗಳಲ್ಲಿ ಭಾಗ್ಯ ಸೀತೆಯರು ಕಾರಿನಲ್ಲಿ ಅವಳ ಮನೆಗೆ ಹೋಗಿದ್ದರು. ರಾಮು ಮನೆಯಲ್ಲಿರಲಿಲ್ಲ. ಅವರಿಬ್ಬರನ್ನೂ ಆದರದಿಂದ ಬರಮಾಡಿಕೊಂಡು ಮಾಧುವಿನ ವಿಚಾರವನ್ನೆಲ್ಲಾ ಸುಶೀಲ ಕೇಳಿ ತಿಳಿದುಕೊಂಡಳು. 'ಸಧ್ಯ ನನ್ನನ್ನು ನೀವೆಲ್ಲಾ ಮರೆತಿಲ್ಲವಲ್ಲಾ' ಎಂದು ದೈನ್ಯದಿಂದ ಹೇಳಿದಳು.

'ಸುಶೀಲಕ್ಕಾ ನಾನೇನು ಖಂಡಿತಾ ಮರೆಯುವುದಿಲ್ಲ. ರಾಮು ಒಪ್ಪಿದರೆ ಅಮ್ಮಾ, ನೀವೂ ಎಲ್ಲರೂ ಒಟ್ಟಿಗೆ ಇರಬಹುದಲ್ಲಾ. ಅಮ್ಮ ಸದಾ ನಿಮ್ಮ ಯೋಚನೆಯಲ್ಲೇ ಇರುತ್ತಾಳೆ' ಎಂದಳು ಭಾಗ್ಯ.

'ಆ ಭಾಗ್ಯ ನನ್ನ ಹಣೇಲಿ ಬರೆದಿಲ್ಲವಮ್ಮಾ'

ನಿಜವಾಗಿಯೂ ರಾಮುಪ್ಪನದೇ ದೊಡ್ಡ ಅಡಚಣೆಯಾಗಿದ್ದಿತು. ಹೊರಡುವಾಗ ರಾಜಶೇಖರನ ವಿಷಯ ಏನಾದರೂ ತಿಳಿಯಿತೇ ಎಂದು ಪ್ರಶ್ನಿಸಿದಳು.

'ಇನ್ನೂ ಇಲ್ಲ. ಸೀತೆ ಅದರಿಂದ ಅರ್ಧವಾಗಿದ್ದಾಳೆ. ಎಂದು ಭಾಗ್ಯ ಉತ್ತರವಿತ್ತಳು.

ಇನ್ನೂ ಹೆಚ್ಚು ಹೊತ್ತು ಇದ್ದರೆ ರಾಮುಪ್ಪನು ಬರಬಹುದೆಂದು ಹೆದರಿ ಭಾಗ್ಯ ಸೀತೆಯರು ಹೊರಟರು. ಕಾರಿನಲ್ಲಿ ಕುಳಿತುಕೊಳ್ಳುವುದಕ್ಕಿಂತ ಮುಂಚೆ 'ನೋವಾದ ಕೂಡಲೇ ಅಮ್ಮನಿಗೆ ಖಂಡಿತವಾಗಿಯೂ ಹೇಳಿ ಕಳುಹಿಸು' ಎಂದುಳು ಭಾಗ್ಯ. ಸುಶೀಲ 'ಆಗಲಿ' ಎಂದಳು.

ಈ ಸಲವೂ ರಾಮುಪ್ಪ ಸುಶೀಲಳ ಹೆರಿಗೆಯ ವೇಳೆಯಲ್ಲಿ ಮನೆಯಲ್ಲಿರಲಿಲ್ಲ. ತನ್ನ ಗಂಡನನ್ನು ಇನ್ನಿಲ್ಲದ ಹಾಗೆ ತನ್ನ ಬಳಿ ಇರಬೇಕೆಂದು ಕೇಳಿಕೊಂಡಳು. ಆದರೂ ಅವನು ಮನೆಯನ್ನೇ ಮರೆತಿದ್ದ. ಹಾಗೂ ಹೀಗೂ ಮಾಡಿ ಪಾರ್ವತಮ್ಮನವರಿಗೆ ಹೇಳಿ ಕಳುಹಿಸಿದಳು. ಅವರು ಕೂಡಲೇ ಹೊರಟರು. ಸುಶೀಲಳು ಬಹಳ ಕಷ್ಟದಿಂದ ನೋವು ತಿನ್ನುತ್ತಿದ್ದಳು. ಜೊತೆಯಲ್ಲಿಯೇ ಬಂದಿದ್ದ ಭಾಗ್ಯ, ಲೇಡೀ ಡಾಕ್ಟರ್ ಮತ್ತು ನರ್ಸನ್ನೂ ಕರೆದುಕೊಂಡು ಬಂದಳು. ಡಾಕ್ಟರು ಪರೀಕ್ಷಿಸಿ ಬಹಳ ಪ್ರಯಾಸದಿಂದ ಸುಶೀಲಳ ಹೆರಿಗೆಯನ್ನು ಕೈಕೊಂಡರು.

ತುಂಬ ಹೊತ್ತು ಕಷ್ಟಪಟ್ಟ ಮೇಲೆ ಸುಶೀಲ ವಿಕಾರವಾದ ಒಂದು ನಿರ್ಜೀವ ಮಗುವನ್ನು ಹೆತ್ತಳು. ಮಗುವನ್ನು ನೋಡಿದ ಕೂಡಲೇ ಚಿಟ್ಟನೆ ಚೀರುತ್ತಾ ತಾಯಿ ಕಣ್ಣು ಮುಚ್ಚಿದಳು.

ಡಾಕ್ಟರು ಮಗುವನ್ನು ನೋಡಿ The child is deformed and has Syphyllus ಎಂದರು. ಅಲ್ಲಿದ್ದ ನರ್ಸು ಅದನ್ನು ಕನ್ನಡದಲ್ಲಿ ಸಾರ್ವತ್ಮನವರಿಗೆ ತಿಳಿಸಿದಳು. ಅವಳು ದೊಡ್ಡ ನಿಟ್ಟುಸಿರು ಬಿಟ್ಟು 'ಸಧ್ಯ ದೊಡ್ಡ ಜೀವನಾ ಉಳಿಸೀವ್ರಾ' ಎಂದು ಕೇಳಿಕೊಂಡರು. ಡಾಕ್ಟರು ಏನೂ ಹೆದರಬೇಕಾದ್ದಿಲ್ಲವೆಂದ ಹೇಳಿ ಸುಶೀಲಳ ನ್ನು ಕೈಯನ್ನು ಬೆಚ್ಚಗೆ ಮಾಡಿದರು. ಅವಳಿಗೆ ಹೋಗಿದ್ದ ಜ್ಞಾನ ಹಿಂದಿರುಗಿ ಬಂತು.

ರಾಮಪ್ಪನ ಸಮಾಚಾರವೇ ಒಂದು ಹಗರಣವಾಯಿತು. ಹಿಂದಿನ ರಾತ್ರಿ ಮಿಲ್ಲಿಗೆ ಹೋದಾಗ ಅವನ ಎದೆಯೊಡೆಯಿತು. ಶಾಂತಯ್ಯ, ರಾಮಪ್ಪನು ಮಿಲ್ಲಿನ ಮೇಲೆ ಮಾಡಿದ ಸಾಲವನ್ನು ರಾಮಪ್ಪನಿಗೆ ತಿಳಿಸದಂತೆಯೇ ತೆಗೆದುಕೊಂಡು ಪರಾರಿಯಾಗಿದ್ದ.

ಒಂದೂವರೆ ಸಾವಿರ ರೂಪಾಯಿ ತುರ್ತಾಗಿ ಒಬ್ಬ ಸೇಟಿಗೆ ಕೊಡಬೇಕಾಗಿತ್ತು. ಅದಕ್ಕಾಗಿ ತಾನು ಪತ್ರಕ್ಕೆ ಸಹಿ ಮಾಡಿ, ಮಿಲ್ಲಿನ ಆಧಾರದ ಮೇಲೆ ಸಾಲ ತೆಗೆದು ಶಾಂತಯ್ಯನಿಗೆ ಸೇಟಿಗೆ ಕಟ್ಟುವುದಕ್ಕಾಗಿ ಅದನ್ನು ಕೊಟ್ಟ. ಶಾಂತಯ್ಯ ಅದೇ ಸಮಯವೆಂದು ಹೇಳದೇ ಕೇಳದೇ ಆ ದುಡ್ಡಿನ ಸಮೇತ ಪರಾರಿಯಾದ.

ರಾಮಪ್ಪನಿಗೆ ಕೂಡಲೇ ಇದು ತಿಳಿಯಲಿಲ್ಲ. ಮಾರನೇ ದಿನವೆಲ್ಲಾ ಸುಮ್ಮನಿದ್ದ. ಸೇಟಿನ ಕಡೆಯವರು ರಾಮಪ್ಪನನ್ನು ಹುಡುಕಿಕೊಂಡು ಬಂದು ಕರಾರಿನ ಪ್ರಕಾರ ಹಣ ಕೊಡದಿದ್ದರೆ ಮರುದಿನವೇ ಅರಸ್ಟ್ ವಾರೆಂಟ್ ತರಬೇಕಾಗುತ್ತದೆಂದು ಹೇಳಿ ಹೊರಟು ಹೋದರು. ಅವನಿಗೆ ಆಶ್ಚರ್ಯವಾಯಿತು. ಶಾಂತಯ್ಯ ಹಣ ಕಟ್ಟಿರಬಹುದೆಂದು ತಿಳಿದಿದ್ದ. ಸೇಟ್ ಕಡೆಯವರು ಇನ್ನೂ ಗಲಾಟೆ ಮಾಡಲು ಅವನಿಗೆ ಘಾಬರಿಯಾಯಿತು. ಮಿಲ್ಲಿಗೆ ಓಡಿದ.

ಶಾಂತಯ್ಯ ಎರಡು ವಾರದಿಂದಲೂ ಕೂಲಿಯವರಿಗೆ ಸಂಬಳವನ್ನೇ ಕೊಟ್ಟಿರಲಿಲ್ಲ. ಲೆಖ್ಖ ಪತ್ರವನ್ನು ನೋಡಲಾಗಿ ಇನ್ನೂ ಒಂದು ಸಾವಿರದ

ತನಕ ಶಾಂತಯ್ಯನು ಹೊಡೆದದ್ದು ಪತ್ತೆಯಾಯಿತು. ಶಾಂತಯ್ಯನಿಗೆ ಹೇಳಿ ಕಳುಹಿಸಿದ. ಆದರೆ ಅವನ ಮನೆಯವರ್‍ಯಾರೂ ಅಲ್ಲಿ ಇರಲಿಲ್ಲ. ಎಲ್ಲಿ ಹುಡುಕಿದರೂ ಸಿಗಲಿಲ್ಲ. ದುಡ್ಡು ಸಹಿತ ಓಡಿ ಹೋಗಿರುವನೆಂಬುದು ರಾಮುಪ್ಪನಿಗೆ ತಿಳಿಯಿತು. ಸೇಟಿನವರ ಸಾಲವನ್ನು ತೀರಿಸಲು ಎರಡು ಮೂರು ಕಡೆ ಬಹಳ ಹೆಣಗಿದ. ಅದು ಸಫಲವಾಗದಿರಲು ಮನೆಗೆ ಹಿಂತಿರುಗಿ ಬಂದ.

ಮನೆಯಲ್ಲಿ ಸುಶೀಲ ನೋವು ತಿನ್ನುತ್ತಿದ್ದಳು. ಕೊನೆಗೆ ಬೇಜಾರಾಗಿ ಶಾಂತೆ ಮನೆಗೆ ಬಂದು ಸಂಗತಿಯನ್ನೆಲ್ಲಾ ತಿಳಿಸಿದನು. ಬೆಳಗಿನ ಝಾವದ ವರೆಗೂ ಗುಲಾಬಿಯನ್ನು ಬಹಳವಾಗಿ ಬೇಡಿಕೊಂಡ. ಅವಳು ತನ್ನ ಹತ್ತಿರ ಒಂದು ಕಾಸೂ ಇಲ್ಲವೆಂದೂ ಗಲಾಟೆ ಮಾಡಿದರೆ ಪೋಲೀಸರಿಗೆ ಹೇಳಿ ಕಳುಹಿಸಲಾಗುವದೆಂದೂ ಎಚ್ಚರಿಸಿದಳು.

ಅಷ್ಟು ಹೊತ್ತಿಗಾಗಲೇ ಸೇಟ್ ಕಡೆಯವರು ವಾರೆಂಟ್ ತೆಗೆಸಿಕೊಂಡು ರಾಮುಪ್ಪನಿಗಾಗಿ ಹುಡುಕುತ್ತಿದ್ದರು. ಗುಲಾಬಿಯ ಮನೆಯಲ್ಲಿಯೇ ರಾಮುಪ್ಪನಿಗೆ ಅರೆಸ್ಟ್ ವಾರೆಂಟ್ ತೋರಿಸಿ ಅವನನ್ನು ಕೋರ್ಟಿಗೆ ಕರೆದುಕೊಂಡು ಹೋದರು.

ತನಗಾದ ಅವಮಾನವನ್ನೆಲ್ಲಾ ಯೋಚಿಸುತ್ತಾ ಕೋರ್ಟಿನ ಕೋಣೆಯಲ್ಲಿ ಕುಳಿತಿ. ಆಗ ಅವನಿಗೆ ಸ್ವಲ್ಪ ಜ್ಞಾನೋದಯವಾಯಿತು.

ಈ ವೇಳೆಗಾಗಲೇ ವಿಷಯ ಪಾರ್ವತಮ್ಮನವರಿಗೆ ತಿಳಿಯಿತು. ಆದರೆ ಮಗುವನ್ನು ಹಡೆದ ಮೇಲೆ .... ಇಳಿದು ಹೋಗಿದ್ದ ಸುಶೀಲಳಿಗೆ ಅವರು ಇವೊಂದನ್ನೂ ತಿಳಿಸಲೇ ಇಲ್ಲ. ಭಾಗ್ಯ ಮಾಧುವಿನೊಡನೆ ಇದನ್ನು ಯೋಚಿಸಿ ತಮ್ಮ ಮನೆಯನ್ನು ಆಧಾರವಾಗಿಟ್ಟು ಅದರ ಮೇಲೆ ಸಾವಿರ ತನಕ ಸಾಲ ತೆಗೆದರು. ಮೂರನೆಯ ದಿನವೇ ಕೋರ್ಟಿನಲ್ಲಿ ರಾಮುಪ್ಪನ ವಿಚಾರಣೆ. ಅದಕ್ಕೆ ಮುಂಚೆಯೇ ಪಾರ್ವತಮ್ಮನವರು ರೂಪಾಯಿಯನ್ನು ಹವಣಿಸಿದ್ದರು.

ರಾಮುಗೆ ಈ ಸಂಗತಿ ತಿಳಿಯುತ್ತಲೂ ತಾನು ತನ್ನ ಚಿಕ್ಕಮ್ಮನಿಗೆ ಹಿಂದೆ ಕೊಟ್ಟ ಶಿಕ್ಷೆಗಾಗಿ ತನಗೆ ತಕ್ಕ ಶಿಕ್ಷೆಯಾಗುತ್ತಿದೆ ಯೆಂದು ಭಾವಿಸಿದ. ಕೂಡಲೇ ಹಿಂದಿನದೆಲ್ಲವೂ ಅವನೆದುರಿಗೆ ಬಂದು ನಿಂತವು. ಅನಂತೂ ಶಾಂ

ತಯ್ಯರ ಮಾತು ಕೇಳಿ ತಾನು ಚಿಕ್ಕಮ್ಮನಿಗೆ ಕೊಟ್ಟ ಕಷ್ಟ; ಹಾಗೆಯೇ ನೀಚ ಸಹವಾಸವನ್ನು ಪಡೆದದ್ದು, ಅದರಿಂದ ಸುಶೀಲಳಿಗಾದ ಅನ್ಯಾಯ ಇವೆಲ್ಲವೂ ಅವನೆದುರಿಗೆ ಬಂದು ನಿಂತವು.

ಮಾಧು ಕೋರ್ಟಿಗೆ ಹಣ ಕಟ್ಟಿದ ಕೂಡಲೇ ರಾಮುವನ್ನು ಹೊರಗೆ ಬಿಟ್ಟರು. ರಾಮು ಹೊರಗೆ ಬಂದ ತಕ್ಷಣವೇ ಪಾರ್ವತಮ್ಮನವರ ಕಾಲುಗಳನ್ನು ಹಿಡಿದುಕೊಂಡು, 'ಕ್ಷಮಿಸಿ, ಈ ಪಾಪಿಯನ್ನು ಚಿಕ್ಕಮ್ಮಾ' ಎಂದು ಅಳುತ್ತ ಕೇಳಿಕೊಂಡ. ಸುಮ್ಮನೆ ಏಳಪ್ಪಾ ಮನೆಗೆ ಹೊರಡೋಣ, ಸುಶೀಲಾ ಕಾದಿದ್ದಾಳೆ' ಎಂದರು ಪಾರ್ವತಮ್ಮ.

ಹಗಲ ರಾತ್ರೆ ಹೀಗೆ ದುಡಿದಿದ್ದ ಪಾರ್ವತಮ್ಮ ಹಾಸಿಗೆ ಹಿಡಿದರು. ನಿಮೋನಿಯಾ ಕಾಹಿಲೆಯೆಂದರು ಡಾಕ್ಟರು. ಅವರಿಗಾಗಿಯೇ ಮಾಧು ಒಂದು ಕೋಣೆಯನ್ನು ಗೊತ್ತುಮಾಡಿದ್ದ. ಅವರ ನರಳಾಟ ಹೆಚ್ಚಾಯಿತು. ರಾಮುಪ್ಪನಂತೂ ಪಾರ್ವತಮ್ಮನವರ ಬಳಿಯೇ ಇರುತ್ತಿದ್ದ. ತಾನುಮಾಡಿದ ತಪ್ಪಿಗಾಗಿ ತನ್ನ ಹೆಂಡತಿಯ ಕ್ಷಮೆಯನ್ನೂ ಕೇಳಿದ್ದ. ಸುಶೀಲಳೂ ಸಹ ಪಾರ್ವತಮ್ಮನವರ ಹತ್ತಿರಲೇ ಇರುತ್ತಿದ್ದಳು. ಭಾಗ್ಯ ಸೀತೆಯರಂತೂ ಹಗಲು ರಾತ್ರೆಯೆನ್ನದೆ ಪಾರ್ವತಮ್ಮನವರ ಸೇವೆಗೆ ಸಿದ್ಧವಾಗಿ ನಿಂತಿದ್ದರು.

ಮಾಧುವಿನ ಆಗ್ರಹಕ್ಕಾಗಿ ಪಾರ್ವತಮ್ಮ ಡಾಕ್ಟರಿಗೆ ಪರೀಕ್ಷೆಗಾಗಿ ಮೈ ತೋರಿಸುತ್ತಿದ್ದರು. 'ನಾನು ಸಾಯುವುದು ಖಂಡಿತ' ಎಂದು ಹೇಳುತ್ತ, ದು:ಖಿಸುತ್ತಿದ್ದರು.

'ರಾಮು, ದೇವರು ನಾನು ಸಾಯುವ ಕಾಲದಲ್ಲಿ ನಿನಗೆ ಒಳ್ಳೆ ಬುದ್ಧಿ ಕೊಟ್ಟಿದ್ದಾನೆ. ಸುಶೀಲಳನ್ನು ಚನ್ನಾಗಿ ನೋಡಿಕೋಬೇಕಪ್ಪಾ'' ಎಂದರು.

'ಚಿಕ್ಕಮ್ಮಾ ನೀವು ಖಂಡಿತ ಸಾಯುವುದಿಲ್ಲ. ನಮ್ಮ ಸಂಸಾರ ಈಗ ಪ್ರಾರಂಭವಾಗಿದೆ. ನೀವು ಅದನ್ನು ನೋಡುವುದಕ್ಕೆ ಇರಲೇಬೇಕು.

ಸೀತೆಯ ಕಡೆಗೆ ತಿರುಗಿ 'ಸೀತಾ ನಿನ್ನದೊಬ್ಬಳದೇ ನನಗೆ ಯೋಚನೆಯಾಗಿದೆ. ಅದರಿಂದ ಸಾಯುವುದಕ್ಕೆ ನನ್ನ ಮನಸ್ಸು ಹಿಂದೇಟು ಹಾಕುತ್ತಲಿದೆ' ಎಂದರು. ಭಾಗ್ಯ ಮಾಧುವನ್ನು ನೋಡಿ ಚಿನ್ನ ರತ್ನದಂತೆ ಕೂಡಿದ್ದೀರಾ ಇಬ್ಬರೂ ಸುಖವಾಗಿ ಬಾಳಿ ನನ್ನ ಕಂದಯ್ಯಗಳಿರಾ' ಎಂದರು

ಪಾರ್ವತಮ್ಮ. 'ಅತ್ತೆ ಮಾತಾಡಬೇಡಿ ............ ಆಯಾಸವಾಗುತ್ತದೆ" ಎಂದ ಮಾಧು.

ಮಾರನೆಯ ದಿವಸದ ಹೊತ್ತಿಗೆ ಪಾರ್ವತಮ್ಮ ಬಹಳ ಕಂದಿಹೋಗಿದ್ದರು. ಡಾಕ್ಟರೂ ಬಹಳ ಹೊತ್ತು ಬದುಕಲಾರರೆಂದು ಹೇಳಿದ್ದರು. ಆಗ ಪೋಸ್ಟ್ ಜವಾನ ಸೀತಾಲಕ್ಷ್ಮಿಯ ಹೆಸರಿಗೆ ಕಾಗದವನ್ನು ತಂದುಕೊಟ್ಟ. ಭಾಗ್ಯ ತಾನೇ ಆ ಕಾಗದವನ್ನು ಕಿತ್ತುಕೊಂಡಳು. ಸೀತೆಯ ಅತ್ತೆಯ ಮನೆಯಿಂದ ಕಳುಹಿಸಿ ಎಂದು ಕಾಗದ ಬರೆದಿದ್ದರೆ ಆ ವಿಷಯ ತನ್ನ ತಾಯಿಗೆ ತಿಳಿಸಕೂಡದೆಂದು ಹೇಳಿದಳು.

ಅಷ್ಟು ಹೊತ್ತಿಗೆ ಸೀತಾನೇ ಅಲ್ಲಿಗೆ ಬಂದಳು. ಕಾಗದವನ್ನು ಓದುತ್ತಾ ಓದುತ್ತಾ ಸೀತೆಯ ಮುಖವರಳಿತು. ಅದನ್ನು ತನ್ನೆದೆಗೆ ಅಪ್ಪಿಕೊಂಡು ಒಂದೆರಡು ಆನಂದ ಭಾಷ್ಪವನ್ನು ಸುರಿಸಿದಳು.

ಭಾಗ್ಯ ಕಾಗದವನ್ನು ನೋಡಿದಳು. ಅದು ರಾಜಶೇಖರನದಾಗಿತ್ತು. ತಾನು ಬೊಂಬಾಯಿನಲ್ಲಿರುವೆನೆಂದೂ, ಸಿನೀಮಾ ಕಂಪೆನಿಯಲ್ಲಿ ತನಗೆ ಕೆಲಸವಿರುವುದೆಂದೂ ಸಧ್ಯದಲ್ಲಿಯೇ ಬೆಂಗಳೂರಿಗೆ ಬರುವುದಾಗಿಯೂ ತನ್ನ ಅತ್ತೆಗೆ ವಂದನೆಗಳನ್ನು ತಿಳಿಸಬೇಕೆಂದು ಬರೆದಿದ್ದ.

ನಿಧಾನದಲ್ಲಿ ಪಾರ್ವತಮ್ಮನವರಿಗೆ ವಿಷಯುವನ್ನು ಭಾಗ್ಯ ತಿಳಿಸಿದಳು. ಅವರು ಸೀತೆಯನ್ನು ಹತ್ತಿರ ಬರಮಾಡಿಕೊಂಡು 'ಸೀತಾ, ದೇವರು ನಿನಗೂ ಒಳ್ಳೆಯದನ್ನೇ ಮಾಡಿದ್ದಾನೆ' ಎಂದು ಸಣ್ಣ ಧ್ವನಿಯಲ್ಲಿ ಹೇಳಿದರು. ಸೀತೆಯೂ ಸಂತೋಷ, ದುಃಖ ಮಿಶ್ರಿತವಾದ ಕಣ್ಣೀರನ್ನು ಸುರಿಸಿದಳು.

ಆ ವೇಳೆಗಾಗಿ ಪಾರ್ವತಮ್ಮನವರ ಬಾಳದೀವಿಗೆ ನಂದುತ್ತಾ ಬಂದಿತ್ತು. ಆಗ ಮುಚ್ಚಿದ ಕಣ್ಣನ್ನು ಪುನಃ ತೆರೆಯಲೇ ಇಲ್ಲ. ಪುನಃ ಪರೀಕ್ಷಿಸುವುದಕ್ಕೆಂದು ಬಂದಿದ್ದಡಾಕ್ಟರು ಪೆಚ್ಚು ಮೋರೆ ಹಾಕಿಕೊಂಡು ಹಿಂತಿರುಗಿದರು. ಏಕಕಾಲದಲ್ಲಿ ಭಾಗ್ಯ, ಸೀತಾ, ರಾಮು ಸುಶೀಲರೆಲ್ಲರೂ ಗೋಳೋ ಎಂದು ಅಳುವುದಕ್ಕೆ ಪ್ರಾರಂಭಿಸಿದರು.

ಪಾರ್ವತಮ್ಮನವರು ಕಾಲವಾದ ತಿಂಗಳ ಮೇಲೆ ಮಾಧುವಿನ ರೂಮಿನಲ್ಲಿ ಒಂದು ಸಭೆ ಸೇರಿತ್ತು. ಅಲ್ಲಿ ರಾಜಶೇಖರ ಸೀತಾ ಭಾಗ್ಯ ಮಾಧು ರಾಮುಪ್ಪ ಸುಶೀಲರೆಲ್ಲರೂ ಇದ್ದರು. ಹಾಗೆಯೇ ಮಾತನಾಡುತ್ತಾ

'ಮುತ್ತಿನಂತಹ ಜೀವ ಅವರದು' ಎಂದನು ಮಾಧು.

'ನಾವೆಲ್ಲಾ ಬರಿ ಮುತ್ತಿನ ಚಿಪ್ಪು ಎಂದು ತಿಳಿದಿದ್ದೆವು. ನಿಜವಾಗಿಯೂ ಮುತ್ತು ಒಳಗೆ ಮುಸುಕಿದ್ದ ಮುತ್ತಿನ ಚಿಪ್ಪಿನಂತಿದ್ದರು.' ಎಂದ ರಾಮಪ್ಪ.

' ಎಲ್ಲರಿಗೂ ಹೇಗೆ ಗೊತ್ತಾಗಬೇಕು. ಯಾವ ಚಿಪ್ಪಿನಲ್ಲಿ ಮುತ್ತಿದೆಯೆಂದು....ಯಾರು ಅದನ್ನು ತಿಳಿದುಕೊಳ್ಳುವರೋ ಅವರೇ ಧನ್ಯರು........' ಎಂದು ಸುಶೀಲ ಮಾತು ಮುಗಿಸಿದಳು.



